# ಸಪ್ತಗಿರಿ

ಡಿಸೆಂಬರ್ 1982





ಒಂದೆ ಸಾಕೆನಗೆ ನಿನ್ನಯ ಸೇವೆಯೊಂದೆ ಸಾಕೆನಗೆ
ಒಂದೆ ಸಾಕು ನಿನ್ನಯ ಸೇವೆ ನಿರತವು ಮಂದರಧರ ಶ್ರೀ ವೆಂಕಟರಮಣನೆ ॥ ಪ ॥

ದೇವಕೀನಂದನನೆ ಎನ್ನನು ನೀ ಕಾವ ಕೃಪಾಕರನೆ
ಭಾವಜನಯ್ಯನೆ ಭಾನುಪ್ರಕಾಶನೆ ದೇವರದೇವ ಶ್ರೀ ವೆಂಕಟರಮಣನೆ – ೧ –

ವಾರಿಧಿರೂಪವಾದ ಭವದೊಳು ಮುಳುಗಿ ದಾರಿಗಾಣದೆಯಿಹೆನು
ತೋರಿಸಿ ದಾರಿಯ ಜ್ಞಾನದ ನಾವೆಯಿಂ ಸೇರಿಸು ತಡಿಯ ಶ್ರೀ ವೆಂಕಟರಮಣನೆ – ೨ –

ತಿರುಪತಿಯಿಂದ ಬಂದು ತರುಣನಾಗಪುರದೊಳು ಗುರುರೂಪದಲಿ
ಕರುಣದಿಂದ ನಾರಾಯಣದಾಸನಿಗೆ ಬೇಗ ಸ್ಥಿರ ಸುಖವೀವ ಶ್ರೀ ವೆಂಕಟರಮಣನೆ – ೩ –

—ಶ್ರೀ ನಾರಾಯಣದಾಸರು.




ಗೌರವ ಸಂಪಾದಕರು.

ಜಿ ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ.

ಕೆ ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ ಎಸ್ ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ,ಪತ್ರಿಕೆಯ-ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ


ಸಂಪುಟ ೧೪] ಡಿಸೆಂಬರ್ ೧೯೮೨ [ಸಂಚಿಕೆ ೭


# ವಿಷಯಸೂಚಿ


ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು .. 3

ಸಂಪಾದಕೀಯ ... 4

ತಂಜಾವೂರು — ಡಾ॥ ಎಸ್. ಅನಂತರಂಗಾಚಾರ್ ... 5

ತಿರುಪ್ಪಾವೈ ಸಾರ — ಕೆ. ಟಿ ರಾಮಸ್ವಾಮ್ಯಯ್ಯಂಗಾರ್ ... 9

ಶ್ರೀರಾಮನ ಆದರ್ಶ ವ್ಯಕ್ತಿತ್ವ — ಡಿ ಕೃಷ್ಣಯ್ಯಂಗಾರ್ ... 25

ಯುವವಾಣಿ

ಕನ್ನಡಕಾವ್ಯಗಳಲ್ಲಿ ಕರುಣರಸ — ಚಿ. ನ ಕೃಷ್ಣಮೂರ್ತಿ ... 11

ಹರಿದಾಸವಾಣಿ

ಕನಕದಾಸರು — ಡಾ॥ ವಸಂತಕುಷ್ಟಗಿ ... 13

ಪ್ರಸನ್ನ ವೆಂಕಟದಾಸ ಪ್ರಶಸ್ತಿ — ಪ್ರಹ್ಲಾದ ಕುಮಾರಭಾಗೋಜಿ ... 17

ನಮ್ಮ ದೇವಾಲಯಗಳು

ಕಪಿಲೇಶ್ವರಸ್ವಾಮಿ ದೇವಾಲಯ — ಡಾ॥ ವಿ. ಕಾಮೇಶ್ವರರಾವ್ ... 21

ಗೃಹಲಕ್ಷ್ಮಿ

ಅನುಭಾವಿ ಆಂಡಾಳ್ — ಎ. ಎಸ್. ಪಂಕಜ ... 22

ಗೀತಾಜಯಂತಿ

ರಾಷ್ಟ್ರನಿರ್ಮಾಣ ಹಾಗೂ ಭಗವದ್ಗೀತೆ — ಸಿ. ಜಿ. ಸಿದ್ದಯ್ಯ ... 27

ಗೀತೆಯ ವಿಚಾರ — ಆರ್. ಗುರುರಾಜಗುಡಿ ... 33

ಕಿಶೋರಜಗತ್

ಮಹರ್ಷಿ ಜಮದಗ್ನಿ — "ರಸಿಕ ಪುತ್ತಿಗೆ" ... 35

ಕರ್ನಾಟಕದಲ್ಲಿ ... ... ... ... 37

ವಾರ್ತಾಲಹರಿ ... 39

## ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಮಲೆಯ ಟಿ ಸಿ ಎಂ ಕಲ್ಯಾಣ ಕಟ್ಟೆಯಲ್ಲಿ ಕೆಲಸಮಾಡುವ ಕ್ಷೌರಿಕರ ದಿನ ವೇತನವನ್ನು ರೂ 9 ದಿನ ದಿಂದ ರೂ 10 ದಿನಕ್ಕೆ ಹಾಗೂ ರೂ 6 ದಿನ ದಿಂದ ರೂ 7 ದಿನಕ್ಕೆ ಏರಿಸಲು ತೀರ್ಮಾನಿಸಲಾಯಿತು.

* * *

ತಿರುಮಲೆಯ ಶ್ರೀವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮಹಾಪ್ರಸಾದ ಪ್ಯಾಕೆಟ್‌ಗಳನ್ನು ತಯಾರಿಸಿ ಮಾರಾಟ ಮಾಡಬೇಕೆಂಬ ಅಭಿಪ್ರಾಯವನ್ನು ಕೈಬಿಡಲಾಯಿತು.

* * * *

ಅವಿಲೋಸಿಯಲ್ಲಿ ತಿ. ತಿ ದೇ. ಕಲ್ಯಾಣಮಂಟಪ ನಿರ್ಮಾಣ ಮಾಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯ ಅನ್ನಪೂರ್ಣ ಕ್ಯಾಂಟೀನ್‌ನವರು ತಮ್ಮಲ್ಲಿ ತಯಾರಿಸಿದ ತಿಂಡಿ ತಿನಿಸುಗಳ ಬೆಲೆಗಳನ್ನು ತಿ ತಿ ದೇ. ಕ್ಯಾಂಟೀನ್‌ನ ತಿಂಡಿ ತಿನಿಸುಗಳ ಬೆಲೆಗಳೊಂದಿಗೆ ಸಮಾನಗೊಳಿಸಲು ಅನುಮತಿ ನೀಡಲಾಯಿತು.

* * * *

ರಂಗಾರೆಡ್ಡಿ ಜಿಲ್ಲೆಯ ಕೇಸರಗುಟ್ಟದಲ್ಲಿನ ಕಲ್ಯಾಣ ಮಂಟಪದಲ್ಲಿನ ಊಟದ ಕೋಣೆಯ ನಿರ್ಮಾಣಕ್ಕೆ ಬಂದ ಟೆಂಡರ್‌ಗಳಲ್ಲಿ ಆರ್. ಶಿವರಾಮಿರೆಡ್ಡಿ ಅವರ ಟೆಂಡರ್ ಅನ್ನು ಒಪ್ಪಲಾಯಿತು.

* * * *

ತಿರುಮಲೆಯ ಶ್ರೀವೆಂಕಟೇಶ್ವರ ಅತಿಥಿಗೃಹದ ಬಳಿಯಲ್ಲಿನ ಸ್ಥಳದಲ್ಲಿ, ವಸತಿಗೃಹ ದಾನ ಯೋಜನೆಯಲ್ಲಿ ಗುಂಟೂರಿನ ಶ್ರೀ ಸಾಂಬಶಿವರಾಯರು ತಾವೇ ತಿ. ತಿ. ದೇ. ಒಪ್ಪಿದಂತಹ ಮನೆಯನ್ನು ನಿರ್ಮಿಸಿ ತದನಂತರ ಅದನ್ನು ತಿ. ತಿ. ದೇ ಗಳಿಗೆ ಒಪ್ಪಿಸಬೇಕೆಂಬ ಅಪೇಕ್ಷೆಯನ್ನು 'ಒಂದು ವರ್ಷದಲ್ಲಿ ಸರ್ವ ರೀತಿಯಲ್ಲೂ ಪರಿಪೂರ್ಣ ಗೃಹ ನಿರ್ಮಾಣವಾಗಿ ತಿ ತಿ. ದೇ. ಗಳಿಗೆ ಒಪ್ಪಿಸಬೇಕೆಂಬ' ಶರತ್ತಿನ ಮೇಲೆ ಒಪ್ಪಲಾಯಿತು.

* * * *

ಮೇಲಿನಂತೆಯೇ ತಾವೇ ಮನೆಯನ್ನು ವಿಶೇಷ ರೀತಿಯನ್ನು ನಿರ್ಮಿಸಿ ದಾನ ನೀಡುವ ಬೆಂಗಳೂರಿನ ಶ್ರೀ ಕಮಲ. ಕೆ. ಮೊರಾಕನ ಅವರ ಅಪೇಕ್ಷೆಯನ್ನು ಒಪ್ಪಿ ಶಂಕು ಮಿಟ್ಟದ ಬಳಿಯ ಸ್ಥಳವನ್ನು ಅವರಿಗೆ ನೀಡಿದ ಮೇಲೆ 19 ತಿಂಗಳಲ್ಲಿ ಹಿಂದಿರುಗಿಸ ಬೇಕೆಂದೂ ಮನೆಯ ಎಲ್ಲ ಪೀಠೋಪಕರ

( 38ನೇ ಪುಟ ನೋಡಿ )



## ತಿರುಮಲೆಯಲ್ಲಿ ಶ್ರೀಮತಿ ಇಂದಿರಾಗಾಂಧಿ

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಕ್ಕೆ ಶ್ರೀಮತಿ ಇಂದಿರಾಗಾಂಧಿಯವರು ಆಗಮಿಸಿ ಅಕ್ಟೋಬರ್ 30, 31 ರಂದು ಸ್ವಾಮಿಯ ಅರ್ಚನೆಯನ್ನು ಮಾಡಿದರು. ಆಲಯ ಮರ್ಯಾದೆಗಳೊಂದಿಗೆ ಅವರನ್ನು ಸ್ವಾಗತಿಸಲಾಯಿತು. ತಿ. ತಿ. ದೇ. ಗಳ ಪುಸ್ತಕಗಳನ್ನು, ಕ್ಯಾಸೆಟ್‌ಗಳನ್ನೂ ಆಲ್ಬಂ ಅನ್ನೂ ಅವರಿಗೆ ನೀಡಲಾಯಿತು ಶ್ರೀ ವೆಂಕಟೇಶ್ವರಸ್ವಾಮಿಯವರ ಸಂದರ್ಶನದ ನಂತರ ಪ್ರಧಾನಿ ಅವರು ಕಲ್ಯಾಣಮಂಟಪದಲ್ಲಿ ದೊಡ್ಡಶೇಷವಾಹನಾರೂಢ ಶ್ರೀ ಉತ್ಸವಮೂರ್ತಿಯನ್ನೂ ನಮಸ್ಕರಿಸಿ ಬಂದರು. ಪ್ರಧಾನಿಯವರ ಈ ತಿರುಮಲೆಯ ಯಾತ್ರೆಯಲ್ಲಿ ಅವರೊಡನೆ ಆಂಧ್ರದ ಮುಖ್ಯಮಂತ್ರಿ ಶ್ರೀ ಕೆ. ವಿಜಯಭಾಸ್ಕರ ರೆಡ್ಡಿ, ರಾಷ್ಟ್ರ ಮುಜರಾಯಿ ಇಲಾಖಾಮಂತ್ರಿ ಶ್ರೀ ಜಿ. ನಾಗೇಶ್ವರರಾವ್ ಮತ್ತಿತರರು ಪಾಲುಗೊಂಡಿದ್ದರು



# ಸಂಪಾದಕೀಯ

ವೈವಿಧ್ಯದಲ್ಲಿ ಏಕತೆ ಎಂಬುದು ನಮ್ಮ ಲಕ್ಷ್ಯ. ಇದು ಅನಾದಿ ಕಾಲದಿಂದಲೂ ಎಲ್ಲ ರಂಗಗಳಲ್ಲೂ ನಮಗೆ ಕಂಡು ಬರುತ್ತಲೇ ಇದೆ. ವೇಷ ಭೂಷಣಗಳು, ಆಚಾರ ವ್ಯವಹಾರಗಳಲ್ಲಿ ವಿವಿಧ ದೃಷ್ಟಿಕೋನಗಳಿದ್ದರೂ, ಮೂಲರೂಪವಾದ ಸನಾತನ ಧರ್ಮ ಧಾರಾವಾಹಿಯಾಗಿ ಅಂತರ್ಲೀನವಾಗಿದ್ದು ನಮ್ಮ ಧರ್ಮಸ್ರವಂತಿಯನ್ನು ಅವಿಚ್ಛಿನ್ನವಾಗಿ ನಡೆಸುತ್ತಿದೆ. ಶಿವನೆಂದೂ, ಕೇಶವನೆಂದೂ, ಶಕ್ತಿಯೆಂದೂ, ಅನೇಕ ವ್ಯಾವಹಾರಿಕ ನಾಮಗಳಲ್ಲಿ ಮನುಷ್ಯ ದೇವರನ್ನು ಸಂಬೋಧಿಸಿ, ಅರ್ಚಿಸುತ್ತಿದ್ದರೂ ಪ್ರತಿಶಾಖೆಯೂ ಇನ್ನೊಂದು ಶಾಖೆಯೊಂದಿಗೆ ಕೈಕುಲುಕಿದ, ಕೈಹಿಡಿದ ಪ್ರಸಂಗಗಳು ಇದ್ದೇ ಇವೆ. ಕೈಕೈ ಮಿಲಾಯಿಸುವುದರವರೆಗೂ ಬಂದವರನ್ನೂ ಆ ಮೂಲಧರ್ಮವೇ ರಕ್ಷಿಸಿ, ಸೌಹಾರ್ದ ಭಾವವನ್ನು ಹರಡಿ, ಒಂದಾಗಿಸಿದೆ ಎಂದರೂ ಆಶ್ಚರ್ಯವಿಲ್ಲ. ಕೇಳಿಲ್ಲವೇ "ಯಂ ಶೈವಾ ಸಮುಪಾಸತೇ.........". ಮಿಗಿಲಾಗಿ ಶಾಸನದಲ್ಲಿ ಕಂಡು ಬರುವ ಹೊಂದಾಣಿಕೆಯು ಸೌಹಾರ್ದ ಭಾವ

ನಮ್ಮ ಮಹಾತ್ಮೆಗಳಲ್ಲಿ ಹಲವು ತಿಂಗಳಿಗೆ ಹೆಚ್ಚಿನ ಪ್ರಮುಖತೆ ಇದೆ. ಆಶ್ವಯುಜ ಕಾರ್ತೀಕಗಳು ಶಕ್ತಿಗೂ, ಮಾರ್ಗಶಿರ ಮಾಘ ಮಾಸಗಳು ಹರಿ, ಹರರಿಗೂ ಹತ್ತಿರವಾದ ತಿಂಗಳು

'ಮಾಸಾನಾಂ ಮಾರ್ಗಶೀರ್ಷೋಽಹಂ' ಎಂದು ಗೀತೆಯಲ್ಲಿ ಕೃಷ್ಣ ಹೇಳಿದ್ದರೂ ಈ ತಿಂಗಳು ಶಿವ ವಿಷ್ಣುಭಕ್ತರಿಬ್ಬರಿಗೂ ಮುಖ್ಯವೇ. ತಥ್ಯವೆಂದರೆ ಮಹಾವಿಷ್ಣುವಿಗೆ ಗುಣವಾಚಕಗಳಾಗಿ ಬಳಸುವ ಶಿವ, ಶರ್ವ, ಸ್ಥಾಣುಃ, ಶಂಭು ಮುಂತಾದವು ರೂಢಿನಾಮಗಳಾಗಿ ಈಶ್ವರನಿಗೆ ಇರುವುವು. ಎಂದರೆ ಒಬ್ಬರಿಗೆ ರೂಢಿನಾಮವಾದದ್ದೇ ಮತ್ತೊಬ್ಬರಿಗೆ ಗುಣವಾಚಕ

ಪೆರಿಯಾಳ್ವಾರರ ಮಗಳು ಗೋದಾದೇವಿಗೆ ಮಾರ್ಗಶಿರಮಾಸದೊಂದಿಗೆ ಅವಿನಾಭಾವ ಸಂಬಂಧ. ಶ್ರೀಕೃಷ್ಣನನ್ನು ಹೊಂದಲು ಗೋಪಿಕೆಯರು ಕಾತ್ಯಾಯನೀ ವ್ರತವನ್ನು ಮಾಡಿದಂತೆಯೇ, ರಂಗನಾಥನನ್ನು ಒಲಿಸಲು ಗೋದಾದೇವಿ ಮಾರ್ಗಶಿರದಲ್ಲಿ ದಿನಕ್ಕೊಂದರಂತೆ ಮೂವತ್ತು ಪಾಶುರಗಳನ್ನು ಹಾಡಿ ಪೂರ್ಣಕಾಮಳಾದಳು.

ಆ ಗೋದಾದೇವಿಯು ರಚಿಸಿದ ಈ ಶ್ರೀ ಗೀತೆಯನ್ನು (ತಿರುಪ್ಪಾವೈ) ವೈಷ್ಣವ ದೇವಾಲಯಗಳಲ್ಲಿ ದಿನಕ್ಕೊಂದರಂತೆ ಮಾರ್ಗಶಿರ ಮಾಸದಲ್ಲಿ ಪಾರಾಯಣ ಮಾಡುತ್ತಾರೆ. ಶ್ರೀ ವೆಂಕಟೇಶ್ವರಸ್ವಾಮಿಯ ಆಸ್ಥಾನಗಳಾದ ತಿರುಪತಿ–ತಿರುಮಲೆಗಳಲ್ಲೂ ಈ ತಿಂಗಳಲ್ಲಿ ತಿರುಪ್ಪಾವೈ ಪಠನ ಪ್ರಮುಖ ಕಾರ್ಯಕ್ರಮವಾಗಿದೆ.

ಶೈವ ಸಂಪ್ರದಾಯದಲ್ಲಿ ಶಿವ ಪ್ರೀತಿಕರವಾಗಿ ಮಾಣಿಕ್ಯವಾಚಕರ್ ರಚಿಸಿದ ತಿರುವೆಂಬಾವೈಯನ್ನು ದಿನಕ್ಕೊಂದರಂತೆ ಮಾರ್ಗಶಿರಮಾಸದಲ್ಲಿ ಮೂವತ್ತು ದಿನವೂ ಪಠಿಸುವುದು ಗಮನಾರ್ಹ. ಶ್ರೀರಂಗನ ಸೇವೆಯಲ್ಲಿ ಹರಿಭಕ್ತರು ತೃಪ್ತರಾದರೆ ಅರುಣಾಚಲೇಶ್ವರನ ಸೇವೆಯಲ್ಲಿ ತಿರುವೆಂಬಾವೈಯನ್ನು ಪಠಿಸಿ ಶಿವಭಕ್ತರು ಚರಿತಾರ್ಥರಾಗುತ್ತಾರೆ.

ಇನ್ನೊಂದು ವಿಧವಾಗಿಯೂ ಸಹ ಈ ಎರಡೂ ಮತಗಳ ಮೇಲಿನೆರಡೂ ಕಾವ್ಯಗಳೂ ಚಿರಸ್ಮರಣೀಯವಾಗಿವೆ. ಪ್ರಜೆಗಳಲ್ಲಿನ ಧಾರ್ಮಿಕತೆಯನ್ನು ಕ್ರಮಬದ್ಧಗೊಳಿಸುವಲ್ಲಿ ಭಾಷೆ ಬೀರುವ ಪ್ರಭಾವ, ಮತಕ್ಕೆ ಭಾಷೆಯಿಂದಾಗುವ ಪ್ರಯೋಜನವನ್ನು ಈ ಎರಡೂ ಕಾವ್ಯಗಳು ಎತ್ತಿ ತೋರಿಸುತ್ತವೆ.

ಎಲ್ಲಕ್ಕಿಂತ ಮುಖ್ಯವಾದ ಅಂಶವೆಂದರೆ ಈ ಮಾರ್ಗಶಿರ ಮಾಸದಲ್ಲಿ ಸಾಮಾನ್ಯವಾಗಿ ವೈಕುಂಠ ಏಕಾದಶಿ, ಶಿವಪರವಾದ ಆರ್ದ್ರಾ ದರ್ಶನೋತ್ಸವಗಳು ಸಂಭವಿಸುತ್ತವೆ. ಹೀಗಾಗಿ ಮಾರ್ಗಶಿರ ಶಿವ ಕೇಶವ ಭಕ್ತರಿಬ್ಬರಿಗೂ ಸಾಮಾನ್ಯ.

ಈ ಪ್ರಪಂಚದಲ್ಲೆಲ್ಲಾ ಅಂತರ್ಲೀನವಾಗಿರುವ ಒಂದು ವ್ಯಾಪ್ತತತ್ತ್ವ ವಿಶ್ವರಕ್ಷಣೆಯ ಭಾರವನ್ನು ನಿರ್ವಹಿಸುತ್ತಿದೆ ಎಂಬುದು ಸಾಂಕೇತಿಕ. ಆದರಿಂದಾಗಿ ವಿಶ್ವದ ಕಾರ್ಯಕ್ರಮಗಳಲ್ಲಿ ಒಂದು ನಿಯತಿ ಉಂಟಾಗುತ್ತದೆ. ಸಮಾಜಕ್ಕೆ ಇದಕ್ಕಿಂತಲೂ ಮಿಗಿಲಾದ ಶಿವಂಕರವಾದ ಕಾರ್ಯಕ್ರಮ ಇನ್ನೊಂದಿಲ್ಲ. ಯಾವ ಹೆಸರಿನಿಂದ ಕರೆದರೂ ವಿಶ್ವ ಸಂಭರಣವೆನ್ನುವ ಮಹತ್ತರ ಮಂಗಳಕರವಾದ ಕಾರ್ಯವನ್ನು ನಿರ್ವಹಿಸುವ ಆ ಅನಂತ ತತ್ತ್ವಕ್ಕೆ ಈ ಮಾರ್ಗಶಿರದ ಪುಣ್ಯ ಸಮಯದಲ್ಲಿ ನಮಸ್ಕರಿಸುವ;

ಶಿವಾಯ ವಿಷ್ಣುರೂಪಾಯ
ಶಿವರೂಪಾಯ ವಿಷ್ಣವೇ
ಶಿವಸ್ಯ ಹೃದಯಂ ವಿಷ್ಣೋಃ
ವಿಷ್ಣೋಶ್ಚ ಹೃದಯಗ್ಂ ಶಿವಃ
ಯಥಾಂತರಂ ನ ಪಶ್ಯಾಮಿ
ತಥಾಮೇ ಸ್ವಸ್ತಿರಾಯುಷಿ ॥

# ತಂಜಾವೂರು

ಡಾ॥ ಎನ್. ಅನಂತರಂಗಾಚಾರ್

ಇದು ತಮಿಳುನಾಡು ರಾಜ್ಯದ ಹಿಂದು ಪಟ್ಟಣ. ಕುಂಭಕೋಣಂ ತಿರುಚಿನಾಪಲ್ಲಿಯ ಭಾಗದ ಮಧ್ಯದ ರೈಲ್ವೆ ಲೈನಿನಲ್ಲಿದೆ. ಅದೇ ಹೆಸರಿನ ಜಿಲ್ಲೆಯ ಕೇಂದ್ರ ಕಾವೇರಿಯ ಮುಖಜ ಭೂಮಿಯ ಪಶ್ಚಿಮದಲ್ಲಿದೆ. ಮದ್ರಾಸಿನಿಂದ ಇಲ್ಲಿಗೆ ರೈಲಿನಲ್ಲಿ ೨೧೫ ಮೈಲಿ ದೂರವಿದೆ. ೧೦ನೆಯ ಶತಮಾನದಿಂದ ತಂಜಾವೂರು ದಕ್ಷಿಣ ಭಾರತದ ಪ್ರಮುಖ ರಾಜಕೀಯ, ಸಾಂಸ್ಕೃತಿಕ ಮತ್ತು ಧಾರ್ಮಿಕ ಕೇಂದ್ರವಾಗಿದೆ. ಈ ಊರಿಗೆ ಪರಾಶರ ಕ್ಷೇತ್ರವೆಂದು ಹೆಸರು. ಹಿಂದೆ ಇದು ತಂಜನ ಎಂಬ ರಾಕ್ಷಸನ ವಾಸಸ್ಥಾನವಾಗಿತ್ತು. ಅವನನ್ನು ಮಹಾವಿಷ್ಣು ಸಂಹರಿಸಿದಾಗ ಆತ ಈ ನಗರವನ್ನು ತನ್ನ ಹೆಸರಿನಲ್ಲಿ ಪ್ರಸಿದ್ಧಗೊಳಿಸಬೇಕೆಂದು ಕೇಳಿಕೊಂಡದ್ದರಿಂದ ಈ ನಗರಕ್ಕೆ ಈ ಹೆಸರು ಬಂದಿತೆಂದು ಐತಿಹ್ಯ ಉಂಟು. ನಗರದಲ್ಲಿ ೧೮ಕ್ಕಿಂತ ಹೆಚ್ಚು ದೇವಾಲಯಗಳಿವೆ. ಇವುಗಳಲ್ಲಿ ಪ್ರಮುಖವಾದುದು ೧೧ನೆಯ ಶತಮಾನದಲ್ಲಿ ನಿರ್ಮಿತವಾದ ಬೃಹದೀಶ್ವರ ದೇವಾಲಯ. ರಾಜರಾಜಚೋಳನು ಇದನ್ನು ನಿರ್ಮಿಸಿದುದರಿಂದ ಈ ದೇವಾಲಯಕ್ಕೆ ರಾಜರಾಜೇಶ್ವರ ದೇವಾಲಯವೆಂದು ಹೆಸರು.

ಬೃಹದೀಶ್ವರ ದೇವಾಲಯದ ಉತ್ತರದಲ್ಲಿ ಹಳೆಯ ಅರಮನೆಯೊಂದುಂಟು. ಇದರೊಳಗೆ ಕಲಾಗ್ಯಾಲರಿ, ಸರಸ್ವತೀ ಮಹಲ್ ಪುಸ್ತಕ ಭಂಡಾರ, ದರ್ಬಾರ್ ಹಾಲ್, ಆಯುಧ ಶಾಲೆ, ಪ್ರತೀಕ್ಷಾ ಗೋಪುರ ಮತ್ತು ಸಂಗೀತ ಮಹಲ್‌ಗಳಿವೆ. ನಾಯಕ ಮತ್ತು ಮರಾಠಾ ಪ್ರಭುಗಳ ಆಸಕ್ತಿಯಿಂದ ಬೆಳೆದ ಈ ಪುಸ್ತಕ ಭಂಡಾರದಲ್ಲಿ ೩೦,೦೦೦ಕ್ಕೂ ಹೆಚ್ಚಿನ ಸಂಪುಟಗಳಿವೆ. ಇವುಗಳಲ್ಲಿ ೮,೦೦೦ಕ್ಕಿಂತ ಹೆಚ್ಚಿನವು ತಾಳೆ ಓಲೆಯ ಹಸ್ತಲಿಖಿತ ಪ್ರತಿಗಳು, ಖಗೋಳ, ವೈದ್ಯ, ಜ್ಯೋತಿಷ್ಯ ಶಾಸ್ತ್ರ ವಿಷಯಕವಾದ ತಮಿಳು, ತೆಲುಗು, ಮರಾಠಿ, ಸಂಸ್ಕೃತ ಮತ್ತು ಇತರ ಭಾಷೆಗಳ ಹಸ್ತ ಪ್ರತಿಗಳು ಇಲ್ಲಿ ಇವೆ. ಶಿವಗಂಗಾ ಸರೋವರ, ಸಿ. ಎಫ್. ಷಾರ್ಟ್ಜ್ ಚರ್ಚು, ಜನತಾ ಉದ್ಯಾನ ಇತರ ಆಕರ್ಷಕ ಕೇಂದ್ರಗಳು.

ತಂಜಾವೂರು ದಕ್ಷಿಣ ಭಾರತದ ಲಲಿತ ಕಲಾ ಕೇಂದ್ರ. ಭರತ ನಾಟ್ಯದ ತವರು. ಪ್ರಸಿದ್ಧ ಕರ್ನಾಟಕ ಸಂಗೀತಗಾರರಾದ ತ್ಯಾಗರಾಜರ ಸಮಾಧಿ ತಂಜಾವೂರಿಗೆ ೮ ಮೈಲಿ ದೂರದಲ್ಲಿರುವ ತಿರುವೈಯೂರಿನಲ್ಲಿದೆ. ಇಲ್ಲಿ ಪ್ರತಿ ವರ್ಷವೂ ಅವರ ಆರಾಧನೆಯು ಅತಿ ವಿಜೃಂಭಣೆಯಿಂದ ನಡೆಯುತ್ತದೆ. ಇಲ್ಲಿ ಸೀರೆ, ಜಮಖಾನ ಸಂಗೀತ ವಾದ್ಯಗಳು ತಯಾರಾಗುತ್ತವೆ. ಇಲ್ಲಿಯ ರೈಲ್ವೇ ನಿಲ್ದಾಣವು ದೊಡ್ಡದಾಗಿದೆ. ಸಮೀಪದ ವಿಮಾನ ನಿಲ್ದಾಣವು ತಿರುಚಿರಪಲ್ಲಿಯಲ್ಲಿದೆ.

ತಂಜಾವೂರಿನ ಪ್ರಾಮುಖ್ಯಕ್ಕೆ ಇಲ್ಲಿಯ ದೇವಾಲಯಗಳೇ ಕಾರಣ. ಇಲ್ಲಿಯ ವಾಸ್ತು ಶಿಲ್ಪಕ್ಕೆ ಪ್ರೋತ್ಸಾಹ ಕೊಟ್ಟವರು ಚೋಳರು. ಇಲ್ಲಿಯ ದೇವಸ್ಥಾನಗಳಲ್ಲೆಲ್ಲಾ ೧೦೧೦ರಲ್ಲಿ ನಿರ್ಮಿತವಾದ ಬೃಹದೀಶ್ವರ ದೇವಾಲಯ ಮತ್ತು ೧೮ನೆಯ ಶತಮಾನದಲ್ಲಿ ನಾಯಕರ ನೇತೃತ್ವದಲ್ಲಿ ನಿರ್ಮಿತವಾದ ಸುಬ್ರಹ್ಮಣ್ಯೇಶ್ವರ ದೇವಾಲಯ ಮುಖ್ಯವಾದುವು. ಬೃಹದೀಶ್ವರ ದೇವಾಲಯವು ಚೋಳರ ಕಲೆಯ ಅದ್ಭುತ ಮಾದರಿ.

ಹೆಸರಿಗೆ ತಕ್ಕಂತೆ ಬೃಹದೀಶ್ವರ ದೇವಾಲಯವು ೨೫೦" × ೨೫೦" ವಿಸ್ತೀರ್ಣವುಳ್ಳ ಪ್ರಾಕಾರದ ಮಧ್ಯದಲ್ಲಿ ಕಟ್ಟಲಾಗಿದೆ, ಕೇವಲ ದೇವಾಲಯದ ವಿಸ್ತೀರ್ಣ ೧೫೦ ಅಡಿ ಉದ್ದ ಮತ್ತು ೯೦ ಅಡಿ ಅಗಲ. ವಿಮಾನದ ಎತ್ತರ ೨೦೦ ಅಡಿ. ಇದು ದಕ್ಷಿಣ ಭಾರತದ ವಿಮಾನಗಳಲ್ಲಿ ಅತ್ಯಂತ ಎತ್ತರವಾದುದು. ನುಣುಪಾದ ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿರುವ ಈ ದೇವಾಲಯದಲ್ಲಿ ಗರ್ಭಗೃಹ, ಪ್ರದಕ್ಷಿಣಪಥ, ಅರ್ಧಮಂಟಪ, ಮುಖ ಮಂಟಪ, ಮಹಾಮಂಟಪ ಪ್ರತ್ಯೇಕ ನಂದೀ ಮುಖಮಂಟಪಗಳೂ ಇವೆ. ಇವೆಲ್ಲವನ್ನೂ ಒಂದೇ ವೇದಿಯಲ್ಲಿ ಪ್ರಾಕಾರದ ಮಧ್ಯಭಾಗದಲ್ಲಿ ಕಟ್ಟಿದೆ.

ವಿಮಾನದ ಗೋಡೆಯ ಹೊರಭಾಗದಲ್ಲಿ ಎರಡು ಅಂತಸ್ತುಗಳಿವೆ. ಈ ಎರಡೂ ಅಂತಸ್ತುಗಳಲ್ಲಿ ಗೂಡುಗಳಿಂದ ಕೂಡಿದ ವಾಸ್ತು ಶಿಲ್ಪ ಅಲಂಕರಣಗಳಿವೆ. ಈ ಗೂಡುಗಳಲ್ಲಿರುವ ಸುಂದರ ಶಿಲ್ಪಗಳು ಚೋಳರ ಕಾಲದ ಮೂರ್ತಿ ಶಿಲ್ಪದ ಉತ್ತಮ ನಿದರ್ಶನಗಳು. ದಕ್ಷಿಣಾಮೂರ್ತಿ, ಚಂದ್ರಶೇಖರಮೂರ್ತಿ, ಅರ್ಧನಾರೀಶ್ವರ, ಭಿಕ್ಷಾಟನ ಮೂರ್ತಿ, ಚಂಡಶಾಸಾನಾನುಗ್ರಹಮೂರ್ತಿ–ಇತ್ಯಾದಿ ಅನೇಕ ಶಿವಲೀಲಾ ಮೂರ್ತಿಗಳನ್ನೂ, ಇತರ ಪೌರಾಣಿಕ ಮೂರ್ತಿಗಳನ್ನು ಇಲ್ಲಿ ಬಿಡಿಸಲಾಗಿದೆ. ಇವುಗಳಲ್ಲದೆ ಅನೇಕ ಪಟ್ಟಿಕೆಗಳಿಂದ ಕೂಡಿದ ಅಧಿಷ್ಠಾನ ಭಿತ್ತಿಯ ಮೇಲಿನ ಅರೆಗಂಬಗಳೂ, ಜೋದಿಗೆಗಳೂ, ಇತರ ಚಿತ್ರ ಪಟ್ಟಿಕೆಗಳೂ ದೇವಾಲಯದ ಭವ್ಯತೆಗೆ ಪೋಷಕವಾಗಿವೆ. ಗರ್ಭಗೃಹದ ಮೇಲ್ಭಾಗದಲ್ಲಿ ೧೩ ಹಂತಗಳಲ್ಲಿರುವ ದ್ರಾವಿಡ ರೀತಿಯ ವಿಮಾನ, ಅದರ ಮೇಲಿರುವ ಬೃಹದಾಕಾರದ ೮೦ ಟನ್ ತೂಕದ ಏಕ ಶಿಲೆಯ ಶಿಖರ – ಇವು ಚೋಳರ ಪ್ರೌಢ ವಾಸ್ತು ಶಿಲ್ಪದ ಕೌಶಲಕ್ಕೆ ಸಾಕ್ಷಿಯಾಗಿವೆ.



ಬೃಹದೀಶ್ವರ ದೇವಾಲಯ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರು ತಿಂಗಳ ಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿ ದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ | ಪ್ರಾ 7–30 ಪ್ರಾ 8–30 |
| | | ಸಮರ್ಪಣ | ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | | ಪ್ರಾ 9–30 ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | | |
| ರಾತ್ರಿ ಗಂಟೆ | ಸಂ 6–30 ರಾ 7–00 | | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | | ರಾ 8–45 ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ದೇವಾಲಯದ ದ್ವಾರಗಳು ಪಾರ್ಶ್ವದಲ್ಲಿವೆ, ಉನ್ನತ ಅಧಿಷ್ಠಾನದ ಮೇಲೆ ದೇವಾಲಯವಿರುವುದರಿಂದ ಎರಡು ಪಾರ್ಶ್ವಗಳಲ್ಲಿಯೂ ಮೆಟ್ಟಿಲುಗಳಿವೆ. ಸೋಪಾನಗಳ ಪಕ್ಕದಲ್ಲಿ ಸುಂದರವಾದ ಕೆತ್ತನೆಗಳುಳ್ಳ ಕೈಪಿಡಿಯಿದೆ. ದ್ವಾರಗಳ ಎರಡು ಪಕ್ಕದಲ್ಲೂ ಬೃಹದಾಕಾರದ ದ್ವಾರಪಾಲಕ ವಿಗ್ರಹಗಳಿವೆ.

ಪ್ರದಕ್ಷಿಣಾ ಪಥವೂ ಎರಡು ಅಂತಸ್ತುಗಳಿಂದ ಕೂಡಿದ್ದು, ಹೊರಗಡೆಯ ಮೂರು ಮುಖದ ಮಧ್ಯದಲ್ಲಿ ಬಾಗಿಲುಗಳಿವೆ. ಪಥದ ಒಳಗೋಡೆಗಳಲ್ಲೂ ಗೂಡುಗಳಿವೆ. ಅವುಗಳಲ್ಲಿ ಶಿವನ ಮತ್ತು ಇತರ ದೇವತೆಗಳ ಮೂರ್ತಿಗಳಿವೆ. ಗೋಡೆಯ ಉಳಿದ ಭಾಗವನ್ನು ಸುಣ್ಣದಿಂದ ನಯಮಾಡಿ ಅದರ ಮೇಲೆ ವರ್ಣ ಚಿತ್ರಗಳನ್ನು ಚಿತ್ರಿಸಲಾಗಿತ್ತು, ಆದರೆ ನಾಯಕರ ಕಾಲದಲ್ಲಿ ಹಳೆಯ ಚಿತ್ರಗಳ ಮೇಲೆ ಪುನಃ ವರ್ಣ ಚಿತ್ರಗಳನ್ನು ಬರೆದಿರುವುದರಿಂದ ಎಲ್ಲೋ ಕೆಲವೆಡೆಗಳಲ್ಲಿ ಮಾತ್ರ ಚೋಳರ ಮೂಲ ಚಿತ್ರ ಕಾಣಲಾಗುತ್ತಿದೆ. ಸ್ವಲ್ಪವೇ ಕಂಡರೂ ಆ ಕಾಲದ ಅಧ್ಯಯನಕ್ಕೆ ಸಹಾಯಕವಾಗಿವೆ.

ಬೃಹದಾಕಾರದ ಲಿಂಗವು ಅಷ್ಟೇ ದೊಡ್ಡದಾದ ಪೀಠವನ್ನು ಹೊಂದಿದೆ. ಗರ್ಭಗೃಹದ ಒಳಭಾಗ ಒಂದೇ ಅಂತಸ್ತಿನಿಂದ ಕೂಡಿದೆ. ಇದರ ಎತ್ತರ ಹೊರಗಿನ ಎರಡು ಅಂತಸ್ತುಗಳಿಗೆ ಸಮ. ಮಂಟಪ ಮತ್ತು ಮುಖ ಮಂಟಪಗಳನ್ನು ಮುಚ್ಚಲಾಗಿದೆ. ಒಳಭಾಗದಲ್ಲಿ ಚೋಳರ ಶೈಲಿಯ ಕಂಭಗಳಿವೆ. ಗರ್ಭಗೃಹದ ಮುಂಭಾಗದ ಎರಡು ಕಂಭಗಳು ನಾಲ್ಕು ಅಂತಸ್ತುಗಳಿಂದ ಕೂಡಿವೆ. ಮಹಾ ಮಂಟಪದಲ್ಲಿ ಮೂರು ಅಂತಸ್ತುಗಳಿವೆ. ದೇವಾಲಯದ ಮುಂದಿರುವ ನಂದೀ ಮಂಟಪದಲ್ಲಿರುವ ನಂದಿಯ ವಿಗ್ರಹವು ಭಾರತೀಯ ಶಿಲ್ಪದ ಕೆಲವೇ ಬೃಹದಾಕಾರದ ನಂದಿಗಳಲ್ಲಿ ಒಂದು.

ಪೂರ್ವ ಪ್ರಾಕಾರದ ಮಧ್ಯದಲ್ಲಿ ಕಲ್ಲಿನಿಂದ ಕಟ್ಟಲ್ಪಟ್ಟ ಒಂದು ಗೋಪುರವಿದೆ. ಪ್ರಾಕಾರದ ಒಳ ಮುಖದಲ್ಲಿ ಸುತ್ತಲೂ

ಎರಡು ಅಂತಸ್ತಿನ ಮಾಳಿಗೆಯಿದೆ. ಮಾಳಿಗೆಯ ಮುಂಭಾಗದಲ್ಲಿ ಎಂಟು ದಿಕ್ಕುಗಳಗಳಲ್ಲಿಯೂ ಅಷ್ಟ ದಿಕ್ಪಾಲಕರಿಗಾಗಿ ಗೂಡುಗಳಿವೆ. ಈ ಗೋಪುರದಿಂದ ಸ್ವಲ್ಪ ಮುಂದೆ ಮತ್ತೊಂದು ಗೋಪುರವಿರುವ ಮತ್ತೊಂದು ಪ್ರಾಕಾರವುಂಟು. ಹೊರಪ್ರಾಕಾರದ ದ್ವಾರ ಈ ಗೋಪುರದಲ್ಲಿದೆ.

ಬೃಹದೀಶ್ವರ ದೇವಾಲಯದ ಪ್ರಾಕಾರದ ಒಳಗೆ ವಾಯುವ್ಯದಲ್ಲಿರುವ ಸುಬ್ರಹ್ಮಣ್ಯೇಶ್ವರ ದೇವಾಲಯವು ೧೮ನೆಯ ಶತಮಾನದಲ್ಲಿ ನಾಯಕರಿಂದ ನಿರ್ಮಿತವಾದ ಉತ್ತಮ ದ್ರಾವಿಡ ರೀತಿಯ ದೇವಾಲಯ. ಗರ್ಭಗೃಹ, ಅರ್ಧ ಮಂಟಪ, ಮುಖಮಂಟಪ ಇತ್ಯಾದಿಗಳಿಂದ ಕೂಡಿದ ಈ ದೇವಾಲಯವು ನಯವಾದ ಗ್ರಾನೈಟ್ ಕಲ್ಲಿನಿಂದಲೇ ನಿರ್ಮಿತವಾಗಿದೆ. ಭಿತ್ತಿಯ ಅಲಂಕರಣಗಳು, ಜಾಲಂಧ್ರಗಳು, ಅರೆಗಂಭಗಳು, ಪಂಜರಗಳು, ಸುಂದರವಾದ ಕಾರ್ನಿಸ್, ಕೈಪಿಡಿ ಇವೆಲ್ಲ ಆಕರ್ಷಕವಾಗಿವೆ. ಮೇಲಿರುವ ವಿಮಾನವು ರಮಣೀಯವಾಗಿದೆ. ಒಳಗಿರುವ ವಿಗ್ರಹ ಷಣ್ಮುಖನಾದುದರಿಂದ ವಿಮಾನಕ್ಕೆ ಆರು ಮುಖಗಳಿವೆ.

ತಂಜಾವೂರು ಕೋಟೆ ದ್ವಾರದ ಪ್ರವೇಶದಲ್ಲಿ ಕೋದಂಡ ಪೆರುಮಾಳ್ ದೇವಾಲಯವಿದೆ. ತಂಜಾವೂರು ನಾಯಕರಿಗೆ ಇದು ಕುಲದೈವವಾಗಿತ್ತು. ಅವರೇ ಇದನ್ನು ಕಟ್ಟಿಸಿದವರು.

ಕೊಂಡ ರಾಜಪಾಳ್ಯದಲ್ಲಿರುವ ಯೋಗ ನರಸಿಂಹ ವಿಷಯಕವಾದ ಒಂದು ದಂತಕಥೆಯಿದೆ. ಪ್ರೇಮದಾಸನೆಂಬುವರು ದೇವಸ್ಥಾನದ ಮಹಾದ್ವಾರದ ಹತ್ತಿರ ಪೂಜಾ ಸಾಮಗ್ರಿಗಳನ್ನು ಮಾರುವ ಒಂದು ಸಣ್ಣ ಅಂಗಡಿಯನ್ನು ಇಟ್ಟುಕೊಂಡಿದ್ದನು. ಅವನು ದೇವಸ್ಥಾನದೊಳಕ್ಕೆ ಪ್ರವೇಶಿಸುವ ಎಲ್ಲ ವೈಷ್ಣವರಿಗೂ ತಲೆ ಬಗ್ಗಿ ನಮಸ್ಕಾರ ಮಾಡುತ್ತಿದ್ದನು. ಇದು ರಾಜನಿಗೆ ಸರಿಬೀಳಲಿಲ್ಲ. ದಾಸನನ್ನು ಲೇವಡಿ ಮಾಡುವುದಕ್ಕಾಗಿ ರಾಜನು ಎರಡು ಕತ್ತೆಗಳನ್ನು ಹೊಡೆದುಕೊಂಡು ಬಂದು ಒಂದಕ್ಕೆ ಮೈತುಂಬ ವೈಷ್ಣವ ಚಿಹ್ನೆಗಳಾದ ನಾಮಗಳನ್ನು ಬಳಿದು ಎರಡನ್ನೂ ಒಳಕ್ಕೆ ಪ್ರವೇಶ ಮಾಡುವ ಹಾಗೆ ಮಾಡಿದನು. ಪ್ರೇಮದಾಸನು ತಕ್ಷಣ ಎದ್ದು ವೈಷ್ಣವ ಚಿಹ್ನೆಯಿದ್ದ ಕತ್ತೆಯ ಹಿಂದೆ ಓಡಿ ಹೋಗಿ ಪ್ರದಕ್ಷಿಣ ನಮಸ್ಕಾರ ಮಾಡಿದನು. ರಾಜನು ದಾಸನನ್ನು ಒಂದಕ್ಕೆ ನಮಸ್ಕಾರಮಾಡಿ ಮತ್ತೊಂದಕ್ಕೆ ಮಾಡದಿರಲು ಕಾರಣವೇನೆಂದು ಪ್ರಶ್ನಿಸಿದನು. ಅದಕ್ಕೆ ದಾಸನು ಹೀಗೆ ಉತ್ತರಿಸಿದನು. 'ಸ್ವಾಮಿ ಒಂದು ವೈಷ್ಣವರ ಚಿಹ್ನೆಯನ್ನು ಹೊಂದಿ ವಿಷ್ಣುವನ್ನು ಜ್ಞಾಪಕಕ್ಕೆ ತರುತ್ತದೆ. ಇನ್ನೊಂದು ನಮ್ಮ ನಿಮ್ಮ ಹಾಗೆ ಸಾಮಾನ್ಯವಾಗಿದೆ.' ರಾಜನಿಗೆ ಕೋಪ ಬಂದು ಅವನನ್ನು ಗಲ್ಲಿಗೇರಿಸಬೇಕೆಂದು ಆಜ್ಞೆ ಮಾಡಿದನು. ಅವನನ್ನು ಗಲ್ಲುಗಂಭದ ಕಡೆಗೆ ಕರೆದುಕೊಂಡು ಹೊರಟರು. ದಾಸನು ಹರಿನಾಮ ಕೀರ್ತನೆ ಮಾಡುತ್ತಲೇ ಹೋದ. ರಾಜನ ನಿರೀಕ್ಷೆಗೆ ನೇರ ವಿರೋಧವಾಗಿ ಅಲ್ಲಿಗೆ ಹೋಗಿ ಸೇರುವ ಮೊದಲೇ ಒಂದು ಆಕಸ್ಮಿಕವಾದ ಬೆಂಕಿಯಿಂದ ಗಲ್ಲುಗಂಭ ಉರಿದು ಕೆಳಗೆ ಬಿದ್ದಿತ್ತು. ರಾಜನಿಗೆ ಜ್ಞಾನೋದಯವಾಯಿತು. ಅವನು ಆ ಪ್ರದೇಶವನ್ನೆಲ್ಲ ದಾನವಾಗಿ ಕೊಟ್ಟನು. ಈಗ ಇದು ಕಲಿಮೇಡು ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ.

ಅಯ್ಯಾಕಡೈ ವೀದಿಯ ಹತ್ತಿರ ಒಂದು ಆದಿಕೇಶವ ದೇವಾಲಯವಿದೆ. ಅದರ ವಿಷಯವಾಗಿಯೂ ಬಹು ಆಶ್ಚರ್ಯಕರವಾದ ಕಥೆಯಿದೆ. ದೇವಸ್ಥಾನದ ಅರ್ಚಕನು ಪ್ರತಿ ದಿನವೂ ದೇವರಿಗೆ ದಂಡೆಯನ್ನು ಕಟ್ಟುವುದಕ್ಕಾಗಿ ಅರಮನೆಯ ಹೂವಿನ ತೋಟದಿಂದ ಹೂವನ್ನು ಪಡೆಯುತ್ತಿದ್ದನು. ಒಂದು ದಿನ ದೇವರಿಗೆ ಹೂವನ್ನು ಕಳುಹಿಸಿದ ಮೇಲೆ ಇದ್ದಕ್ಕಿದ್ದ ಹಾಗೆ ರಾಜನು ದೇವರ ದರ್ಶನಕ್ಕಾಗಿ ಬರುವುದಾಗಿ ಹೇಳಿ ಕಳುಹಿಸಿದನು. ಈ ಮಧ್ಯೆ ಅರ್ಚಕನು ದೇವಸ್ಥಾನದ ನೃತ್ಯೆಯ ಸೌಂದರ್ಯಕ್ಕೆ ಮಾರುಹೋಗಿ ಹೂವನ್ನೆಲ್ಲ ಅವಳಿಗೆ ಮುಡಿಸಿ ಬಿಟ್ಟಿದ್ದನು. ರಾಜನ ಆಗಮನವನ್ನು ಕೇಳಿ ಅವನು ಆತುರದಲ್ಲಿ ಆಕೆಯ ತಲೆಯಲ್ಲಿದ್ದ ಹೂವನ್ನು ಹಾಗೆಯೇ ಕೇಶವನ ಕಿರೀಟಕ್ಕೆ ಅಲಂಕರಿಸಿದನು. ರಾಜನು ಬಂದಾಗ ಅವನಿಗೆ ಪ್ರಸಾದ ಕೊಡುವಾಗ ಅದರಲ್ಲಿ ಒಂದು ಕೂದಲಿದ್ದಿತು. ಇದೆಲ್ಲಿಂದ ಬಂದಿತೆಂದು ಪ್ರಶ್ನಿಸಿದಾಗ ಅರ್ಚಕನು ಕೇಶವ ಪೆರುಮಾಳ್ ತಲೆಯ ಕೂದಲೆಂದೇ ಹೇಳಿಬಿಟ್ಟನು. ರಾಜನು ಪರೀಕ್ಷಿಸಲು ನಿಂತೇಬಿಟ್ಟನು. ಭಕ್ತಿ ನಿಷ್ಠನಾದ ಅರ್ಚಕನು ತನ್ನನ್ನು ಈ ಸನ್ನಿವೇಶದಿಂದ ಪಾರುಮಾಡಬೇಕೆಂದು ಕೇಶವನನ್ನು ಪ್ರಾರ್ಥಿಸಿದನು. ಭಕ್ತಪರಾಧೀನನಾದ ಕೇಶವನು ರಾಜನಿಗೆ ತಲೆಯ ಕೇಶಪಾಶದೊಡನೆಯೇ ದರ್ಶನವಿತ್ತನು. ಅಂದಿನಿಂದ ಅರ್ಚಕನು ಭಕ್ತಶ್ರೇಷ್ಠನಾದನು. ✶



ಬೃಹದೀಶ್ವರ ದೇವಾಲಯ ಪಾರ್ಶ್ವನೋಟ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹೈನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ತಿರುಪ್ಪಾವೈ ಸಾರ

ಜನಕ್ಕೆ ತಿರುಪ್ಪಾವೈಯನ್ನು ಕೊಟ್ಟು ಉಪಕರಿಸಿದ ಆಂಡಾಳನ್ನು ಶ್ರೀವೈಷ್ಣವರು ಆಳ್ವಾರುಗಳಲ್ಲಿ ಒಬ್ಬಳನ್ನಾಗಿ ಪರಿಗಣಿಸಿದ್ದಾರೆ. ಈಕೆಯ ಹೆಸರು ಗೋದಾ. ಪೆರಿಯಾಳ್ವಾರೆಂದು ಪ್ರಸಿದ್ಧರಾಗಿರುವ ವಿಷ್ಣುಚಿತ್ತರು ಪರಮಾತ್ಮನನ್ನು ವಾತ್ಸಲ್ಯದಿಂದ ನೋಡಿ, ಆತನ ಸೌಂದರ್ಯಕ್ಕೆ ಎಲ್ಲಿ ದೃಷ್ಟಿಯಾಗುತ್ತದೆಯೋ ಎಂಬ ಭಯದಿಂದ ಮಂಗಳಾಶಾಸನವನ್ನು ಮಾಡಿದ ಮಹನೀಯರು. ಇವರಿಗೆ ತುಳಸೀವನದಲ್ಲಿ ಸಿಕ್ಕಿದವಳು ಗೋದಾ. ಸದ್ಗುಣ ಸಂಪನ್ನರಾದ, ಸಕಲಶಾಸ್ತ್ರಗಳನ್ನೂ ತಿಳಿದ, ಪರಮಾತ್ಮನ ಸೇವೆಯಲ್ಲೇ ನಿರತರಾದ ಇವರಿಗೆ ಲಕ್ಷ್ಮಿಯೋಪಾದಿಯಲ್ಲಿದ್ದ ಈ ಮಗು ಸಿಕ್ಕಿದ್ದು ಇವರ ಭಾಗ್ಯ. ಇವಳನ್ನು ಭಕ್ತಶಿರೋಮಣಿಯಾಗಿ ಬೆಳೆಸಲು, ಅವಳು ರಂಗನಾಥನನ್ನೇ ಗಂಡನಾಗಿ ನಿರ್ಣಯಿಸಿ, ಪೂಜಿಸಿ ಅವನನ್ನೇ ಪಡೆದಳು. ಈ ಪೂಜೆಗೆ ಕಟ್ಟಿದ ಕವನ ಕುಸುಮಗಳೇ ಶ್ರೇಷ್ಠವಾದ "ತಿರುಪ್ಪಾವೈ". ತಾನೇ ಭಕ್ತಿಯಲ್ಲಿ ಮುಳುಗಿ ಆ ಆನಂದದ ಉತ್ಕರ್ಷದಲ್ಲಿ ಹಾಡಿದ ಈ ಹಾಡುಗಳು ನಾನಾರ್ಥಗಳಿಂದ ಜನರಿಗೆ ಪ್ರಿಯವಾಗಿವೆ, ಭಕ್ತಿಪ್ರಚೋದಕವಾಗಿವೆ.

ಮಾರ್ಗಶಿರಮಾಸದಲ್ಲಿ ಉಷಃಕಾಲದಲ್ಲೆದ್ದು ಸ್ನಾನಮಾಡಿ ಶುದ್ಧವಾದ ಮನಸ್ಸಿನಿಂದ ಭಗವಂತನನ್ನು ಸರ್ವದಾ ಆರಾಧಿಸುತ್ತಿರುವುದನ್ನು ನಾವು ನೋಡಿದ್ದೇವೆ. ತಿರುಪ್ಪಾವೈಯನ್ನು ಜನರು ಹೊತ್ತಿಗೆ ಮುಂಚೆ ಹಾಡಿ ಸಾಯಂಕಾಲವೋ, ಸಾಧ್ಯವಾದಾಗಲೋ ಈ ವಿಷಯಗಳಲ್ಲಿ ಪ್ರವಚನಗಳನ್ನು ತನಡೆಸಿ, ಭಗವದ್ಭಕ್ತಿಯಲ್ಲೂ, ತತ್ತ್ವಗಳನ್ನು ಅರ್ಥಮಾಡಿಕೊಳ್ಳುವುದರಲ್ಲೂ, ಕಾಲ ಕಳೆಯುತ್ತಾರೆ. ತಿರುಪ್ಪಾವೈ ಶ್ರೇಷ್ಠವಾದ ಹಾಡೆಂದು ಪರಿಗಣಿಸಲಾಗಿದೆ. ಆದುದರಿಂದ ಅದನ್ನು ಹಾಡುವುದರಲ್ಲಿ ಒಂದು ಆಸೆಯೂ ಕಾಣುತ್ತದೆ. ಆಂಡಾಳ್ ಅದನ್ನು ಹಾಡಿ ಪರಮಾತ್ಮನನ್ನು ಪಡೆದುಕೊಂಡಳೆಂದು ಹೇಳಲಾಗಿದೆ, ಅದಕ್ಕೆ ಮುಂಚೆ ಗೋಪಕನ್ನೆಯರು ಈ ಮಾಸದಲ್ಲಿ ಕಾತ್ಯಾಯನೀ ವ್ರತವನ್ನು ಒಂದು ತಿಂಗಳು ನಡೆಸಿ ಕೃಷ್ಣನನ್ನು ಸಾಧಿಸಿಕೊಂಡರಂತೆ. ಪರಮಾತ್ಮನಲ್ಲಿ ಭಕ್ತಿಮಾಡಿ ಆತನನ್ನು ಹೊಂದುವುದಾದರೆ ಅದು ಧರ್ಮಸಮ್ಮತವಾದುದೇ, ಹಾಗೂ ಜೀವನದ ಗುರಿಯೇ. ಅಂತೂ ಈ ಪೂಜಾವ್ರತವು ಫಲಪ್ರದವಾದುದು ಎಂಬುದು ಜನರಲ್ಲಿ ಮೂಡಿ ಇದನ್ನು ಶ್ರದ್ಧೆಯಿಂದ ಆಚರಿಸುವುದು ಸರಿಯಷ್ಟೆ. ಕನ್ಯೆಯರು ಇದನ್ನು ಶ್ರದ್ಧೆಯಿಂದ ಆಚರಿಸಿದರೆ ಅವರಿಗೆ ಅನುಗುಣನಾದ ಗಂಡನು ದೊರೆಯುತ್ತಾನೆಂಬುದು ರೂಢಿಯ ಮಾತು. ಇವು ಭಗವದ್ಭಕ್ತಿಪ್ರಚೋದಕ, ಫಲಪ್ರದಾಯಕ ಎಂಬುದು ಒಂದು ಕಡೆಯಾದರೆ ಇನ್ನೊಂದು ಕಡೆ ಇವು ಮತದ ತಿಳುವಳಿಕೆಯನ್ನು ಕೊಡುತ್ತವೆ ಎಂದು ಹೇಳುತ್ತಾರೆ. ಪ್ರಕೃತ ತಿರುಪ್ಪಾವೈ ಶ್ರೀವೈಷ್ಣವ ತತ್ತ್ವವನ್ನು ಪ್ರತಿಪಾದಿಸುತ್ತದೆ ಎಂಬುದನ್ನು ವಿಹಂಗಮವಾಗಿ ನೋಡೋಣ.

ಮಾರ್ಗಶಿರ ಮಾಸ ತಾನೆಂದು ಕೃಷ್ಣನು ಗೀತೆಯಲ್ಲಿ ಹೇಳಿರುವುದು ಎಲ್ಲರಿಗೂ ವೇದ್ಯವೆ. ಈ ಶ್ರೇಷ್ಠ ಮಾಸದ 30 ದಿನಗಳಲ್ಲಿ ದಿನಕ್ಕೊಂದರಂತೆ ತಿರುಪ್ಪಾವೈಯ ಒಂದು ಪದ್ಯವನ್ನು ಹೇಳಿ ಭಗವಂತನನ್ನು ಸ್ತುತಿಸುತ್ತಾರೆ, ಇದೊಂದು ವ್ರತ – ಪರಮಾತ್ಮನನ್ನು ಸಾಧಿಸುವುದಕ್ಕೆ. ಬೆಳಗ್ಗೆ ಬ್ರಾಹ್ಮೀ ಮುಹೂರ್ತದಲ್ಲೆದ್ದು ಭಕ್ತಿಮಾಡುವ ಪ್ರತಿಯೊಬ್ಬರನ್ನೂ ಎಬ್ಬಿಸಿಕೊಂಡು ಪರಮಾತ್ಮನು ಪ್ರತಿಷ್ಠಿತವಾಗಿರುವ ದೇವಾಲಯಕ್ಕೆ ಬಂದು ಆತನನ್ನು ಸ್ತುತಿಸಿ ಅವನ ಅನುಗ್ರಹವನ್ನು ಪಡೆಯುವುದೇ ಈ ವ್ರತ. ತಿರುಪ್ಪಾವೈಯಲ್ಲಿ ಈ ವಿಷಯ ಸುಂದರವಾಗಿ ಕವಿಹೃದಯದಿಂದ ಶಾಸ್ತ್ರಾರ್ಥಗಳನ್ನು ತಿಳಿಸುವ ರೀತಿಯಲ್ಲಿ ವರ್ಣಿತವಾಗಿದೆ.

ವಿಶಿಷ್ಟಾದ್ವೈತದಲ್ಲಿ ಮೂರು ಮಂತ್ರಗಳು ಅತಿಶಯವಾದ ಸ್ಥಾನವನ್ನು ಹೊಂದಿವೆ. ಮೊದಲನೆಯ ಮೂಲಮಂತ್ರ "ಓಂ ನಮೋ ನಾರಾಯಣಾಯ" ಎಂಬುದು. ತಿರುಪ್ಪಾವೈಯಲ್ಲಿ ನಾರಾಯಣನನ್ನೇ ನಂಬಿ ಆರಾಧಿಸುವವರು ಗೋಕುಲದ ಸುಂದರಿಯರಾದ ಗೋಪಕನ್ನೆಯರು. ಅವತಾರ ಪುರುಷನಾದ ಕೃಷ್ಣನನ್ನು ಅವರು, 'ನಂದಗೋಪಾಲನ್ ಕುಮರನ್ ಅವನ್', 'ನಾರಾಯಣನೇ ನಮಕ್ಕೆ ಪರೈತರುವಾನ್', 'ನಾರಾಯಣನ್ ಮೂರ್ತಿಕೇಶವನ್ನೈ ಪಾಡುವೋಮ್', 'ಓಂಗಿ ಉಲಗಳಂದ ಉತ್ತಮನ್ನೈ ಪೇರ್ ಪಾಡಿ', 'ಮಾಲ್ಮೈ ಮಣಿವಣಾ'– ಹೀಗೆ ನಾರಾಯಣನನ್ನು ಕೃಷ್ಣನೆಂದೇ ಭಾವಿಸಿ ಹಾಡಿದ್ದಾರೆ. ಇದು ಮೂಲಮಂತ್ರವೇ ಅಲ್ಲವೆ? ಮೂಲಮಂತ್ರದಲ್ಲಿನ ವೇದಗಳ ಸಾರವೂ, ಮೋಕ್ಷವನ್ನಪೇಕ್ಷಿಸುವವರಿಗೆ ಉಪಾಯವೂ, ನರನಿಗೂ ನಾರಾಯಣನಿಗೂ ಇರುವ ಅಳಿಸಲಾಗದ ಸಂಬಂಧವೂ "ನಮಕ್ಕುಂಗೆ ಒಳಿಕ್ಕ ಒಳಿಯಾದು" ಹಾಗೂ ಶೇಷ ಶೇಷಿ, ಶರೀರ ಶರೀರಿ ಭಾವಗಳೂ–ಎಲ್ಲವನ್ನೂ ಆಂಡಾಳ್ ಹೇಳಿದ್ದಾಳೆ. ನಾರಾಯಣ ಎಂಬ ಪದವನ್ನೇ ನಾರಾ ಅಯಣ ಎಂದು ಭಾಗಮಾಡಿ, ನರ ಸಮೂಹದಿಂದ ಕೂಡಿದವನೆನ್ನುತ್ತಾರೆ, ನರರಲ್ಲಿ ವಾಸಿಸುವನು ಎಂದೂ ಹೇಳುತ್ತಾರೆ. ಮೂಲಮಂತ್ರದ ಹಿರಿಮೆಯನ್ನು ಉಪನಿಷತ್ತುಗಳು ಮತ್ತು ಸ್ಮೃತಿಗಳು ಬಹಳವಾಗಿ ಹೊಗಳುತ್ತವೆ. ಪಾಪಗಳನ್ನು ನೀಗಿಸಿ ಫಲವನ್ನು ಕೊಡುವಂಥಾದ್ದು, ಹಾಗೂ ಉಪಾಯಗಳನ್ನು ಸಾಧಿಸುವ ಮಾರ್ಗ ಮೂಲಮಂತ್ರ.

ಆಕಿಂಚನ ಭಾವದಿಂದ ಅನನ್ಯ ಭಕ್ತಿಯಿಂದ ನಾರಾಯಣನನ್ನು ಹಾಡುವುದು ತಿರುಪ್ಪಾವೈಯಲ್ಲಿ ಮೊದಲನೆಯ ಹಾಡು, ಎರಡನೆಯದು "ದ್ವಯ"ವೆನ್ನುವ ಮಂತ್ರ. "ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ, ಶ್ರೀಮತೇ ನಾರಾಯಣಾಯ ನಮಃ" ಎಂದು ಇದರ ಅರ್ಥ,

ಶ್ರೀಕೆ.ಟಿ. ರಾಮಸ್ವಾಮ್ಯಯ್ಯಂಗಾರ್



ಎಂದರೆ ಸಾಮಾನ್ಯವಾದ ಅರ್ಥ ಹೀಗಿದೆ. ಮಹಾಲಕ್ಷ್ಮಿಯ ಜೊತೆಯಲ್ಲಿ ನಿತ್ಯವಾಗಿ ಸೇರಿರುವ ಶ್ರೀಮನ್ನಾರಾಯಣನ ಚರಣ ಕಮಲಗಳಲ್ಲಿ ನಾನು ಪ್ರಪತ್ತಿ ಮಾಡುತ್ತೇನೆ. 'ಶ್ರೀಮತ್' ಶಬ್ದದ ಪ್ರಯೋಜನವೇನೆಂದರೆ ನಾರಾಯಣ ನನ್ನ ಮೋಕ್ಷೋಪಾಯವಾಗಿ ಮಾಡುವ ಸಂದರ್ಭದಲ್ಲಿ ಅವನ ಭಾರ್ಯೆಯೂ ಲೋಕಮಾತೆಯೂ ಕಾರುಣ್ಯಮಯಿಯೂ ಆದ ಮಹಾಲಕ್ಷ್ಮಿಯೂ ಸಹ ಉಪಾಯವಾಗಿ ನಿಲ್ಲುತ್ತಾಳೆ. ಜೀವಾತ್ಮನು ಇವರಿಬ್ಬರನ್ನೂ ಉದ್ದೇಶಿಸಿ ಪ್ರಪತ್ತಿಯನ್ನು ಅನುಷ್ಠಿಸಬೇಕು. ಈ ಪ್ರಪತ್ತಿಯೇ ವಿಶಿಷ್ಟಾದ್ವೈತದಲ್ಲಿ ಸಾರಭೂತವಾದುದು. ನಿರ್ಮೋಹ ನಿರಹಂಕಾರಗಳಿಂದ ಕೂಡಿಸ ತಾನೇ ಅವನ ಸೊತ್ತು, ಅವನಿಗೆ ತನ್ನನ್ನು ಅರ್ಪಿಸಿಕೊಳ್ಳುತ್ತೇನೆಂಬ ಭಾವದಿಂದ ಕೂಡಿದ ಈ ಪ್ರಪತ್ತಿಯು ನಿಜಕ್ಕೂ ಹಿರಿದಾದುದೇ. ಪೂರ್ವ ಮತ್ತು ಉತ್ತರ ಖಂಡಗಳಲ್ಲಿ ಮೊದಲು ಮಹಾಲಕ್ಷ್ಮಿಯನ್ನು ಹೇಳುವುದೂ ಅದಕ್ಕಾಗಿಯೆ ಎಂದರೆ ಇಬ್ಬರನ್ನೂ ಕುರಿತು ಮಾಡುವ ಪ್ರಪತ್ತಿ. ಶ್ರೀಮನ್ನಾರಾಯಣನನ್ನೇ ಫಲವಾಗಿ ಹೊಂದಬೇಕಾದುದು ಶ್ರೀಯ ಶಿಫಾರಸ್ಸಿನಿಂದ – ಪುರುಷಕಾರದಿಂದ ಅದನ್ನು ಸುಲಭವಾಗಿ ಈ ರೀತಿ ಪಡೆಯಬಹುದೆಂಬುದೇ ಹೃದಯದಸಾರ. ಇದನ್ನು ಆಂಡಾಳ್ ತಿರುಪ್ಪಾವೈಯಲ್ಲಿ ಹೇಗೆ ಅಳವಡಿಸಿದ್ದಾಳೆಂದು ನೋಡೋಣ.

ಆಂಡಾಳ್ ತನ್ನ ಹಾಡುಗಳಲ್ಲಿ ನಪ್ಪಿನ್ನೈಯನ್ನು ಕರೆದುಕೊಂಡು ಹೋಗಲು ಅವಳ ಮನೆಬಾಗಿಲಿಗೆ ಬಂದು ಅವಳನ್ನು ನಾನಾರೀತಿಯಲ್ಲಿ ಹೊಗಳುತ್ತಾಳೆ. ಶ್ರೀದೇವಿ, ಭೂದೇವಿ, ನೀಳಾದೇವಿಯರು (ನಪ್ಪಿನ್ನೈ) ಪರಮಾತ್ಮನ ಪ್ರೇಯಸಿಯರು. ನಪ್ಪಿನ್ನೈಯನ್ನು ಕೃಷ್ಣನು ವರಿಸಿದ್ದಾನೆ. ಅವಳ ಸಹಾಯ ಆಂಡಾಳಿಗೆ ಬೇಕು, ಆದುದರಿಂದ ಅವಳನ್ನು 'ನಪ್ಪಿನ್ನೈ, ನಪ್ಪಿನ್ನೈ ನಂಗಾಯ್ ನಂದಗೋಪನ್ ಮರುಮಹಳೇ, ತಿರುವೇ ಸುಂದರಿಯೇ – ತಾಯಿ, ನಿನ್ನ ಕೃಪೆಯಿಲ್ಲದೆ ನಾರಾಯಣನನ್ನು ಹೊಂದಲು ಸಾಧ್ಯವಿಲ್ಲ, ಅವನನ್ನು ಸೇವಿಸಲು ಬಂದಿದ್ದೇವೆ, ಆದುದರಿಂದ ನೀನು ಸಹಾಯಮಾಡಬೇಕಮ್ಮಾ' ಎಂದು ಭಕ್ತಿಯಿಂದ ಕೇಳಿಕೊಳ್ಳುತ್ತಾರೆ. ಪದ್ಯಗಳು ರಚನಾ ವೈಶಿಷ್ಟ್ಯದ ರೀತಿಗೂ, ವಿಶಿಷ್ಟಾದ್ವೈತ ತತ್ತ್ವದ ರೀತಿಗೂ ಹೊಂದಿಕೊಳ್ಳುತ್ತವೆ.

ತರುವಾಯ ಆದದ್ದೇನು? ಈ ಭಕ್ತರು ಪರಮಾತ್ಮನ ಸನ್ನಿಧಿಗೆ ಬಂದಿದ್ದಾರೆ. ಆತನನ್ನು ಕೇಳಬೇಕಾದದ್ದೇನು? ಸಣ್ಣ ಪುಟ್ಟ ವಿಷಯಗಳನ್ನೇ? "ಇಟ್ರೈ ಪರೈಕೊಳ್ವಾನನ್ರು ಗೋವಿಂದ" (ಸಣ್ಣ ಪುಟ್ಟ ವಿಷಯಗಳಿಗಲ್ಲ ಗೋವಿಂದ ನಾವು ಬಂದಿರುವುದು), ಎಟ್ರೈಕ್ಕುಂ ಏಳೇಳು ಪಿರ್ವಿಕ್ಕುಂ ಉನ್ ತನ್ನೋಡು ಉಟ್ರೋಮೆ ಯಾವೋಮ್ ಉನಕ್ಕೇ ಆಟ್ ಶೈವೋಮ್, ಮಟ್ರೈನಮ್ ಕಾಮಂಗಳೇ ಮಾಟ್ರು" ಎಂದು ಕೇಳಿಕೊಂಡಿದ್ದಾರೆ. ಎಂದರೆ ನಿನ್ನ ಸೇವೆಯೇ ನಮಗೆ ಬೇಕಾದದ್ದು, ನೀನು ಹುಟ್ಟಿದಾಗೆಲ್ಲಾ ನಾವೂ ಹುಟ್ಟಿ ನಿನ್ನ ವೈಭವವನ್ನು ನೋಡಿ ಸಂತೋಷಪಡುವ ಹಾಗೂ ಸೇವೆಮಾಡುವ ಈ ಇಷ್ಟಾರ್ಥವನ್ನು ಕರುಣಿಸು ಸ್ವಾಮಿ ಎನ್ನುತ್ತಾರೆ. ಹಾಗೂ ವೈಕುಂಠವನ್ನು ಕೇಳುವುದಿಲ್ಲ. ವೈಕುಂಠದಲ್ಲಿ ಸ್ವಾಮಿಯ ಸೌಲಭ್ಯ ಸೌಶೀಲ್ಯಗಳನ್ನು ನೋಡಲು ಸಾಧ್ಯವಾಗದೆ ಅಲ್ಲಿದ್ದ ನಿತ್ಯಸೂರಿಗಳು ಗೋಕುಲಕ್ಕೆ ಬಂದು ಕೃಷ್ಣನ ಲೀಲೆಗಳನ್ನು ನೋಡಿ ಆನಂದಪಟ್ಟರಂತೆ. ಎಂದ ಮೇಲೆ ಸ್ವಾಮಿಯ ಕಲ್ಯಾಣಗುಣಗಳನ್ನು ನೋಡಲು ಅವನ ಅವತಾರವೇ ಸರಿ. ಆಕಾರಣ ಅವನು ಹುಟ್ಟಿದ ಸ್ಥಳದಲ್ಲಿ ಹುಟ್ಟಿ ಅವನನ್ನು ನೋಡಿ ಆನಂದ ಪಡುವುದಕ್ಕಿಂತ ವೈಕುಂಠದಲ್ಲಿ ಬೇರೇನಿದೆ. ಗೋಪಿಯರಿಗೆ ಇದು ತಿಳಿದು ಗೋಕುಲದಲ್ಲಿ ಹುಟ್ಟಿದ್ದಾರೆ. ಎಂಥಾ ಭಾಗ್ಯ ಅವರದು. ಹಾಗೆಯೇ ಗೋದಾ ಪರಮಾತ್ಮನ ಗುಣಾತಿಶಯಗಳನ್ನು ಅನುಭವಿಸಲು ನಿನ್ನ ಜೊತೆಯಲ್ಲೇ ಹುಟ್ಟಿ ನಿನ್ನ ಸಕಲ ಗುಣಗಳನ್ನೂ ಅನುಭವಿಸುವ ಭಕ್ತಿ ಭಾಗ್ಯವನ್ನು ಕೊಡು ಎಂದು ಕೇಳುತ್ತಾಳೆ. ಮತ್ತೂ ಈ ವ್ರತವನ್ನು ಭಕ್ತಿಶ್ರದ್ಧೆಗಳಿಂದ ಆಚರಿಸಿ ಸ್ವಾಮಿಯನ್ನು ಒಲಿಸಿ ಮದುವೆಯಾದಳೆಂದು ಐತಿಹ್ಯವಿದೆ, ಇದನ್ನು ("Bridal Mysticism") ಕನ್ಯಾಪರೋಕ್ಷಾನುಭಾವ ಎನ್ನುತ್ತಾರೆ. ಮಿಸ್ಟಿಸಿಸಂ (Mystycism) ಎಂದರೆ ಪರಮಾತ್ಮನನ್ನು ಅತೀಂದ್ರಿಯಗಳಿಂದ ಸಾಕ್ಷಾತ್ಕರಿಸಿಕೊಳ್ಳುವುದು ಎನ್ನೋಣ. ಸ್ವಾಮಿಯನ್ನು ನಾಯಕನಾಗಿಟ್ಟು ತಾನೇ ನಾಯಕಿಯೆಂದು ಪ್ರೀತಿಯಿಂದ ಭಕ್ತಿಯನ್ನು ಮಾಡಿದರೆ ಅದಕ್ಕೆ Bridal Mysticism ಎನ್ನುತ್ತಾರೆ. ಪುರುಷನೆಂದರೆ ಪರಮಾತ್ಮನೊಬ್ಬನೆ–ಇತರ ಜೀವಿಗಳು ಹೆಣ್ಣಾಗಲಿ ಗಂಡಾಗಲಿ, ಹೆಣ್ಣೇ ಎಂದು ಹೇಳಲಾಗಿದೆ. ತತ್ಕಾರಣ ಪರಮಾತ್ಮನಿಗೂ ಜೀವಿಗೂ ಇರುವ ಪ್ರೀತಿ ಸತಿ ಪತಿ ಪ್ರೀತಿಯೇ ಎನ್ನುತ್ತಾರೆ. ಮೇಲಿನ ದೃಷ್ಟಿಯಿಂದ ಆಂಡಾಳ್ ನಾಯಕನಿಗಾಗಿ ಹಂಬಲಿಸಿ ಅವನನ್ನು ಸಾಧಿಸಿಕೊಂಡಳಲ್ಲವೆ. ಹಾಗೂ ಆಂಡಾಳ್ ಹೇಳುತ್ತಾಳೆ 'ನಿನ್ನಾಸೆ ಒಂದು ಬಿಟ್ಟು ಮತ್ತಾವ ಕಾಮವಿದ್ದರೂ ಬಿಡಿಸಿ ಅದನ್ನು ನಿನ್ನ ಪ್ರೀತಿಗೆ ತಿರುಗಿಸು' (Sublimate) ಎಂದು. ಆಂಡಾಳ್ ಇಲ್ಲಿ ಕಾಣಿಸಿರುವ ಪುರುಷಾರ್ಥ ಪರಮಾತ್ಮನನ್ನು ಹೊಂದುವುದು, ಪರಮಾತ್ಮನ ಸೇವೆ ಮಾಡುವುದು. ಇದು ಪರಮಾತ್ಮನಿಗಾಗಿ ಮಾಡುವ ಕೈಂಕರ್ಯ. ಇದು ವಿಶಿಷ್ಟಾದ್ವೈತದ ಗುರಿಯೇ ಆಗಿದೆ, ಪುರುಷಾರ್ಥವನ್ನು ಸಾಧಿಸುವ ಮಾರ್ಗವೇ ಆಗಿದೆ.

ಮೂರನೆ ಮಂತ್ರ ಚರಮ ಶ್ಲೋಕ. ಇದು ಎರಡನೆಯ ಮಂತ್ರದ ರೂಪವೇ ಆಗಿದೆ. ಶ್ರೀಮನ್ನಾರಾಯಣ ಚರಣಂ ಶರಣಂ ಪ್ರಪದ್ಯೇ ಎಂದರೂ 'ಮಾಮೇಕಂ ಶರಣಂ ವ್ರಜ'

( 32ನೇ ಪುಟ ನೋಡಿ )

# ಕನ್ನಡ ಕಾವ್ಯಗಳಲ್ಲಿ ಕರುಣಾರಸ

ಕಾವ್ಯಾಲಂಕಾರರು ಹಲವಾರು ರಸಗಳನ್ನು ಹೇಳಿದ್ದರೂ ಭವಭೂತಿಯು ತನ್ನ ಉತ್ತರರಾಮಚರಿತದಲ್ಲಿ 'ಕರುಣವೊಂದೇ ರಸ' ಎಂದು ಸಾರಿದ್ದಾನೆ. ಶೃಂಗಾರ ವೀರ ರಸ ಪ್ರಧಾನವಾದ ಕಾವ್ಯ ನಾಟಕಗಳು ಹೇಗೆ ಮಾನವ ಹೃದಯವನ್ನು ತಾಕಿ ಸೆಳೆಯಬಲ್ಲವೋ ಹಾಗಿಯೇ ಕರುಣರಸ ಪ್ರಧಾನವಾದ ಕಾವ್ಯಗಳೂ ಮಾನವ ಹೃದಯವನ್ನು ಕಲಕುವಂತಹ ಸಾಮರ್ಥ್ಯವನ್ನು ಹೊಂದಿವೆ.

ಶೃಂಗಾರ ವೀರರಸಗಳು ಓದುಗನ ಉತ್ಸಾಹ ಉದ್ವೇಗಗಳನ್ನು ಹೆಚ್ಚಿಸಿ ಮಾನಸಿಕ ಉತ್ಕರ್ಷಕ್ಕೆ ಅನುವುಮಾಡಿಕೊಡುತ್ತವೆಯೇ ವಿನಹ ಮನಸ್ಸಿನ ಪರಿಪಾಕಕ್ಕೆ ಎಡೆ ಮಾಡಿಕೊಡುವುದಿಲ್ಲ. ಕರುಣರಸ ಪ್ರಧಾನವಾದ ಕಾವ್ಯಗಳಲ್ಲಿ ಭಯ, ದಯೆ, ದೈನ್ಯ, ವಿಷಾದ ಇವೆಲ್ಲವುಗಳೂ ಜೊತೆಗೂಡಿ ವಾಚ

**ಯುವವಾಣಿ**

ಕನ ಹೃದಯವನ್ನು ಮಿಡಿದು ಅವುಗಳಿಗೆ ಸ್ಪಂದಿಸುವಂತೆ ಮಾಡುತ್ತವೆ. ಅಲ್ಲಿನ ಶೋಕ ಸನ್ನಿವೇಶಗಳಲ್ಲಿ ತಾನೂ ಬೆರತು ಹೋಗಿ ಭಾವನೆಗಳ ಹಿತ್ತಡದಲ್ಲಿ ಕಣ್ಣೀರು ಮಿಡಿಯುತ್ತಾನೆ. ವಿಧಿಯ ಎದುರು ಮಾನವ ಅಸಹಾಯಕತೆಯ ಅರಿವುಂಟಾಗಿ ತನ್ನಲ್ಲಿರಬಹುದಾದ ಲೌಕಿಕ ಅಪೇಕ್ಷೆಗಳ ಬಗ್ಗೆ ವೈರಾಗ್ಯಭಾವವುಂಟಾಗಿ ಬದುಕಿನ ಸಾರ್ಥಕತೆಯ ಬಗ್ಗೆ ಆಲೋಚಿಸುವಂತಾಗುತ್ತದೆ. ಅಷ್ಟೇ ಅಲ್ಲದೆ ಶೋಕ ಕಾವ್ಯಗಳು ಅಜ್ಞಾನದ ಕತ್ತಲೆಯಲ್ಲಿ ನಡೆಯುತ್ತಿರುವ ನಿಸ್ಸಹಾಯಕ ಚೇತನವನ್ನು ಬೆಳಕಿನ ದಾರಿಯಲ್ಲಿ ಕರೆದೊಯ್ಯುತ್ತವೆ.

ಲೌಕಿಕ ದೃಷ್ಟಿಯಲ್ಲಿ ಶೋಕವು ಕೇವಲ ದುಃಖಮಯವಾದದ್ದು ಎನಿಸಿದಲ್ಲಿ ಕಾವ್ಯ ಪ್ರಪಂಚದಲ್ಲಿ ಅಲೌಕಿಕ ಆನಂದವನ್ನುಂಟು ಮಾಡಬಲ್ಲದ್ದಾಗಿರುತ್ತದೆ. ಕವಿ ತನ್ನ ಕಾವ್ಯ ಪ್ರತಿಭೆಯಿಂದ ಬದುಕಿನ ಸಾಮಾನ್ಯ ದುಃಖವನ್ನು ತನ್ನ ಅಸಮಾನ್ಯ ಕಲ್ಪನೆಯಿಂದ ಶೋಕ ಸೌಂದರ್ಯವನ್ನಾಗಿಸುತ್ತಾನೆ. ಕಾವ್ಯರಸಿಕರಿಗೆ ಅಲೌಕಿಕ ಆನಂದಾನುಭವವುಂಟಾಗುತ್ತದೆ. ಸಾಮಾನ್ಯವಾಗಿ ಶೋಕ ಕಾವ್ಯಗಳಲ್ಲಿ ಸಾವಿನಿಂದುಂಟಾದ ಭರಿಸಲಾಗದ ದುಃಖ ವರ್ಣಿತವಾಗಿರುತ್ತದೆ. ಆದರೆ ಕರುಣಾರಸ ಸನ್ನಿವೇಶದ ವರ್ಣನೆಯಲ್ಲಿ ಕವಿಯ ಕೌಶಲ ಅಡಗಿರುವುದರಿಂದ ನಮ್ಮ ಮನಸ್ಸು ಹೃದಯಗಳನ್ನು ಸೆಳೆಯಬಲ್ಲ ಗುಣ ಹೊಂದಿರುತ್ತದೆ. ಮಾನವ ಒಂದಲ್ಲ ಒಂದು ಸಂದರ್ಭದಲ್ಲಿ ಶೋಕವನ್ನು ಅನುಭವಿಸಲೇ ಬೇಕಾಗುತ್ತದೆ. ಮಾನವ ಬದುಕಿನಲ್ಲಿಯ ಸುಖ ಸಂತೋಷಗಳೊಡನೆ ದುಃಖವೂ ಬೆರೆತಿದೆ. ಡಿ. ವಿ. ಜಿ. ಅವರು ಹೇಳಿದ ಹಾಗೆ

"ತೊಟ್ಟಿಲುಗಳೆಷ್ಟೋ ಮಸಣಗಳಷ್ಟು
ಧರೆಯೊಳಗೆ"

ಆದ್ದರಿಂದಲೇ ಶೋಕದ ಮೂಲಕವಾಗಿಯೆ ತನ್ನ ಬಿಡುಗಡೆಯ ಮಾರ್ಗವನ್ನು ಕಂಡುಕೊಳ್ಳಬೇಕಾಗಿದೆ. ಶೋಕದ ಆಘಾತಗಳಿಗೆ ಮೇಲಿಂದ ಮೇಲೆ ಮಾನವ ಸಿಲುಕಿದಾಗ ಜೀವನವನ್ನು ಎದುರಿಸುವ ಶಕ್ತಿ ಬರುತ್ತದೆ. ಶೋಕ ಕಾವ್ಯಗಳು ಅಂತಹ ಮಾನಸಿಕ ಸಾಮರ್ಥ್ಯ ನೀಡುತ್ತವೆ.

ಕಾವ್ಯ ಸೃಷ್ಟಿಗೂ ಶೋಕವೇ ಮೂಲವಾಗಿದೆ. ನಮ್ಮ ನಾಡಿನ ಮಹಾ ಕಾವ್ಯವಾದ ರಾಮಾಯಣ ಸೃಷ್ಟಿಗೆ ಒಂದು ಕರುಣಾಜನಕ ದೃಶ್ಯವೇ ಕಾರಣವಾಯಿತು.

ಮಾನಿಷಾದ ಪ್ರತಿಷ್ಠಾಂ
ತ್ವಮಗಮಃ ಶಾಶ್ವತೀಃ ಸಮಾಃ
ಯತ್ಕ್ರೌಂಚ ಮಿಥುನಾದೇಕ
ಮವಧೀಃ ಕಾಮಮೋಹಿತಮ್

ಕ್ರೌಂಚ ಮಿಥುನ ಆಕಾಶದಲ್ಲಿ ಆನಂದದಿಂದ ವಿಹರಿಸುತ್ತಿದ್ದವು. ಅಷ್ಟರಲ್ಲಿ ಬೇಡನೊಬ್ಬನ ಬಾಣಕ್ಕೆ ಈಡಾದ ಗಂಡು ಕ್ರೌಂಚ ನೆಲಕ್ಕೆ ಉರುಳಿತು. ಪ್ರಿಯಕರನನ್ನು ಕಳೆದುಕೊಂಡ ಹೆಣ್ಣು ಕ್ರೌಂಚ ನೋವಿನಿಂದ ಅರಚುತ್ತಾ ಹಾರಾಡುತ್ತಿತ್ತು. ಕರುಳು ಬಿರಿಯುವ ಈ ನೋಟವನ್ನು ಕಂಡ ಮಹರ್ಷಿ ವಾಲ್ಮೀಕಿಯ ಬಾಯಿಂದ ಒಮ್ಮೆಲೇ ಈ ಶ್ಲೋಕ ಹುಟ್ಟಿತು. ಮಹರ್ಷಿಯ ಶೋಕವೇ ಶ್ಲೋಕದ ರೂಪ ತಾಳಿತು. ದುಃಖದ ಉದ್ವೇಗದಲ್ಲಿ ನುಡಿದಿದ್ದ ಮಾತು ಮಹಾ ಕಾವ್ಯದ ರಚನೆಗೆ ನಾಂದಿಯಾಯಿತು.

**ಶ್ರೀ ಚಿ. ನ. ಕೃಷ್ಣಮೂರ್ತಿ** ಎಂ. ಎ.,

ಸಂಸ್ಕೃತ ಕನ್ನಡ ಆಲಂಕಾರಿಕರು ಕಾವ್ಯಗಳಲ್ಲಿ ಶೋಕರಸದ ಮಹತ್ವವನ್ನು ಹೇಳಿದ್ದಾರೆ. ಆನಂದವರ್ಧನನು 'ರಸೇಷು ಕರುಣೋ ರಸಃ' – ಎಂದು ಹೇಳಿ ಹೃದಯವನ್ನು ಆರ್ದ್ರಗೊಳಿಸಿ ರಸಾನಂದವನ್ನುಂಟುಮಾಡುವ ಶಕ್ತಿ ಕರುಣ ರಸಕ್ಕಿದೆಯೆಂದು ಒತ್ತಿ ಹೇಳಿದ್ದಾನೆ. ಭಟ್ಟನಾಯಕ, ಅಭಿನವಗುಪ್ತ ಮುಂತಾದವರು ಕರುಣರಸದ ಪ್ರಾಮುಖ್ಯವನ್ನು ಹೇಳಿ ಅದರಿಂದ ವಿಶಿಷ್ಟವಾದ ಆನಂದಾನುಭವವುಂಟಾಗುವುದೆಂದಿದ್ದಾರೆ. 'ಕಾವ್ಯಾವಲೋಕನ'ವನ್ನು ಬರೆದ ನಾಗವರ್ಮ ಮತ್ತು 'ರಸರತ್ನಾಕರ'ವನ್ನು ಬರೆದ ಸಾಳ್ವರು ಕರುಣರಸದ ಬಗ್ಗೆ ವಿವರಿಸಿದ್ದಾರೆ. ನಾಗವರ್ಮ ಕರುಣರಸದ ಬಗ್ಗೆ ಸಂಗ್ರಹವಾಗಿ ಹೀಗೆ ಹೇಳಿದ್ದಾನೆ.

"ಪ್ರಕಟತರ ಶೋಕಭಾವ
ಪ್ರಕೃತಿಪರಂ ಕರುಣಮಾರ್ತ ಜನಕಂ
ವಿಷಯಂ"

ಒಪ್ಪೆನಲ್ಲಿ ಭಾರತೀಯ ಕಾವ್ಯಮೀಮಾಂಸಕರ ದೃಷ್ಟಿಯಲ್ಲಿ ಕರುಣರಸದ ಅತಿಶಯವೆಂದರೆ ಅದರ ರಸಾಸ್ವಾದದಿಂದ ಮನುಷ್ಯನಲ್ಲಿರುವ ರಜೋಗುಣ ಹಾಗೂ ತಮೋಗುಣಗಳು ಅಳಿದು ಆತನ ಹೃದಯದಲ್ಲಿ ಸತ್ತ್ವಗುಣಗಳು ಪ್ರಕಾಶಿಸಿ ಅಲೌಕಿಕ ಆನಂದ ಹುಟ್ಟುತ್ತದೆ. ಶೋಕ ಕಾವ್ಯವನ್ನು ಓದುತ್ತಿರುವಾಗ ಕಾಣಿಸಿಕೊಳ್ಳುವ ಕಣ್ಣೀರು ಅಂತಹ ಆನಂದದ ಪ್ರತೀಕವಾಗಿದೆಯೆಂದು ಅವರೆಲ್ಲರ ಅಭಿಪ್ರಾಯವಾಗಿದೆ.

ಪಾಶ್ಚಾತ್ಯ ಕಾವ್ಯ ಮೀಮಾಂಸಕರೂ ಸಹ ಕರುಣರಸದಿಂದ ಹುಟ್ಟುವ ಪರಮಾನಂದವನ್ನು ಸಮರ್ಥಿಸಿದ್ದಾರೆ. ದುಃಖಾಂತ ನಾಟಕಗಳನ್ನು ನೋಡುವುದರಿಂದ ಮಾನವನ ಭಾವನೆಗಳು ಶುದ್ಧೀಕರಣವಾಗಿ ದುರಂತ ಪಾತ್ರಗಳ ಅನುಭವಗಳೊಂದಿಗೆ ತನ್ನ ಅನುಭವಗಳನ್ನು ಹೋಲಿಸಿ ಸಾಂತ್ವನ ಪಡೆಯುತ್ತಾನೆ. ಇದರಿಂದ ಹೃದಯದ ಭಾರವು ತಗ್ಗಿ ಹಗುರವಾಗುತ್ತದೆಂದು ಅರಿಸ್ಟಾಟಲ್ ತಿಳಿಸಿದ್ದಾನೆ. ಶೋಕ ಕವನಗಳು ಹೆಚ್ಚು ಮಧುರ ಭಾವನೆಗಳನ್ನುಂಟು ಮಾಡಬಲ್ಲವು ಎಂದಿದ್ದಾನೆ ಕವಿ ಶೆಲ್ಲಿ. 'our sweetest songs are those that tell of saddest thoughts" ಎಂಬ ಶೆಲ್ಲಿಯ ಮಾತಿನ ಅರ್ಥವೂ ಇದೇ ಆಗಿದೆ. ಕನ್ನಡದ ವರಕವಿ ಅಂಬಿಕಾತನಯ ದತ್ತರು, "ಶೋಕದೆಳೆಯಲ್ಲಿ ಶ್ಲೋಕ ಹೆಣೆದಿರೆ ಲೋಕವೇ ರಸವುಂಡಿದೆ" ಎಂಬ ಮಾತಿನಲ್ಲಿ ಕರುಣರಸದಿಂದ ಒದಗುವ ರಸಾನಂದವನ್ನು ಅತಿ ಸೂಕ್ಷ್ಮವಾಗಿ ಹೇಳಿದ್ದಾರೆ.

ಹೀಗೆ ಸಹೃದಯರ ಮನಸ್ಸನ್ನು ಸೂರೆಗೊಂಡು ಅವರ ಭಾವನಾ ಲೋಕದಲ್ಲಿ ಅದ್ಭುತ ಬದಲಾವಣೆಗಳನ್ನು ತರಬಲ್ಲ ಕರುಣರಸದ ಪ್ರವಾಹವೇ ಹರಿದಿರುವ ಶೋಕಕಾವ್ಯಗಳು ಕನ್ನಡದಲ್ಲಿ ಹಲವಾರು ಇವೆ.

ಗದಾಯುದ್ಧ :– ರನ್ನ ಕವಿಯ ಗದಾಯುದ್ಧ ಕನ್ನಡದ ಶ್ರೇಷ್ಠಕಾವ್ಯಗಳಲ್ಲಿ ಒಂದಾಗಿದೆ. ಈ ಕಾವ್ಯ ವೀರರಸ ಪ್ರಧಾನವಾಗಿದ್ದರೂ ಕೆಲವು ಸನ್ನಿವೇಶಗಳಲ್ಲಿ ಕರುಣರಸವನ್ನು ಉಕ್ಕಿಸಿ ವಾಚಕರ ಮನಸ್ಸು ಹೃದಯಗಳನ್ನು ಸೂರೆಗೊಳ್ಳುವ ರೀತಿಯಲ್ಲಿ ಶೋಕ ಪದ್ಯಗಳನ್ನು ಕವಿ ರಚಿಸಿದ್ದಾನೆ. ಗದಾಯುದ್ಧದ ನಾಯಕ ದುರ್ಯೋಧನನ ಮೂಲಕವಾಗಿ ಕವಿ ಕರುಣರಸವನ್ನು ಪೋಷಿಸಿ ಅದ್ಭುತರೀತಿಯಲ್ಲಿ ಅಭಿವ್ಯಕ್ತಮಾಡಿದ್ದಾನೆ.

ಕುರುಕ್ಷೇತ್ರದ ಯುದ್ಧದಲ್ಲಿ ಸರ್ವವನ್ನು ಸರ್ವರನ್ನು ಕಳೆದುಕೊಂಡು ದುರ್ಯೋಧನ ಏಕಾಂಗಿಯಾಗಿದ್ದಾನೆ. ಜಯಲಕ್ಷ್ಮಿ ಕುರುಪತಿಗೆ ಒಲಿಯಲಿಲ್ಲವೆಂದು ಎಲ್ಲರಿಗೂ ಸ್ಪಷ್ಟವಾಗಿದೆ. ಹಿತಾಕಾಂಕ್ಷಿಗಳು ಕೆಲವರು ಪಾಂಡವರೊಂದಿಗೆ ಸಂಧಿಮಾಡಿಸುವ ಪ್ರಯತ್ನದಲ್ಲಿದ್ದಾರೆ. ಆದರೆ ದುರ್ಯೋಧನನ ಮನಸ್ಸು ತಮ್ಮಂದಿರನ್ನು ಕರ್ಣನಂತಹ ಆಪ್ತನನ್ನು ಕಳೆದುಕೊಂಡು ಶೂನ್ಯವಾಗಿದೆ.

ಎನಗೆ ಮನಮಿಂದು ಶೂನ್ಯಂ
ಮನೆ ಶೂನ್ಯಂ ಬೀಡು ಶೂನ್ಯವಾದುದು
ಸಕಲಾ

( 29ನೇ ಪುಟ ನೋಡಿ )

# ಕನಕದಾಸರು

ಜೀವನ ಮೌಲ್ಯಗಳನ್ನು ತಿಳಿಸಿ, ಸಾಮಾನ್ಯನ ಬದುಕನ್ನು ಉದಾತ್ತಗೊಳಿಸುವುದೇ ಸಾಹಿತ್ಯದ ಮೂಲ ಉದ್ದೇಶ. ಕನ್ನಡ ಸಾಹಿತ್ಯದಲ್ಲಿ ಅದು ಮೂಲತಃ ಶರಣರಿಂದಲೂ ದಾಸರಿಂದಲೂ ಸಾಧಿತವಾಗಿದೆ. ಅವರು ಬಾಳಿದ ಜೀವನವೇ ಶರಣ ವಾಙ್ಮಯ ಹಾಗೂ ಹರಿದಾಸ ವಾಙ್ಮಯಗಳು, ನಮ್ಮ ಬದುಕಿನ ದಾರಿಯ ನಂದಾದೀಪಗಳು ಒಂದು ವಚನ ದೀಪ್ತಿ, ಮತ್ತೊಂದು ಕೀರ್ತನ ದೀಪ್ತಿ. ಎರಡರಲ್ಲಿಯೂ ಭಕ್ತಿ ಜ್ಞಾನ ವೈರಾಗ್ಯಗಳು ಮುಪ್ಪುರಿಗೊಂಡಿರುವ ತ್ರಿವೇಣೀಸಂಗಮದ ಬೆಳಕು ತುಂಬಿ ತುಳುಕಿದೆ. ಹೀಗಿದ್ದರೂ ಎರಡರಲ್ಲಿಯೂ ಭಕ್ತಿಯದೇ ಮೇಲುಗೈ

ಅಲ್ಲಮ ಪ್ರಭು, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿಯರು ಭಕ್ತಿ ವಚನೋದ್ಯಾನದ ಮೇರುಮಂದಾರಗಳಾದರೆ, ಭಕ್ತಿ ತರಂಗಿಣಿಯಿಂದ ಸೂಸುತ್ತಿರುವ ದಾಸೋದ್ಯಾನದ ಶ್ರೀ ಪಾರಿಜಾತಗಳೆಂದರೆ ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಮೊದಲಾದವರು. ಅಲ್ಲಮಪ್ರಭು ಮತ್ತು ಬಸವಣ್ಣನವರು ಶರಣಸಾಹಿತ್ಯ ಅರ್ಥಾತ್ ವಚನ ಸಾಹಿತ್ಯದ ಅಶ್ವಿನೀದೇವತೆಗಳಾದರೆ, ಪುರಂದರದಾಸ ಹಾಗೂ ಕನಕದಾಸರು ಹರಿದಾಸ ಸಾಹಿತ್ಯದ ಅಶ್ವಿನೀದೇವತೆಗಳೆಂದು ಪ್ರತ್ಯೇಕ ಹೇಳಬೇಕಾಗಿಲ್ಲ.

ಪುರಂದರದಾಸರು ಮತ್ತು ಕನಕದಾಸರು ಸಮಕಾಲೀನರು. ಸಮನ್ವಯಶೀಲರು. ವ್ಯಾಸರಾಯರಿಂದ ಅನುಗ್ರಹೀತರಾದವರು. ಆಳವಾದ ಜೀವನಾನುಭವವನ್ನು ಹೊಂದಿದವರು. ಅಷ್ಟೇ ಗಂಭೀರವಾಗಿ ಅಂತರಾಳದ ಸೊಬಗನ್ನೂ ತಿಳಿದವರು. ತಾವು ತಿಳಿದುಕೊಂಡ ತಿಳಿವನ್ನು ಕೀರ್ತನೆಗಳ ಮುಖಾಂತರ ಸಾಮಾನ್ಯರ ಮನಸ್ಸಿನಲ್ಲಿ ಬಿಂಬಿಸುವ ರಸಋಷಿಗಳು, ಕನ್ನಡ ಉಪನಿಷತ್ಕಾರರು. ಆದರೂ ಕನಕದಾಸರದೇ ಒಂದು ವೈಶಿಷ್ಟ್ಯ. ಏಕೆಂದರೆ ನಿಸ್ಸೀಮ ಭಕ್ತಿಯು, ಕೀರ್ತನೆ ಅರ್ಥಾತ್ ಭಕ್ತಿ ಗೀತೆಗಳಂತೆ ಅವರ ಕಾವ್ಯ ಕೃತಿಗಳಲ್ಲಿಯೂ ಅಭಿವ್ಯಕ್ತವಾಗಿದೆ. ಆದರೆ ಉಳಿದ ಹರಿದಾಸರು ಕನಕದಾಸರಂತೆ ಕೀರ್ತನೆಗಳ ಜೊತೆಗೆ ಕಾವ್ಯಕೃತಿಗಳನ್ನು ಹೀಗೆ ವಿಶೇಷವಾಗಿ ರಚನೆ ಮಾಡಲಿಲ್ಲವೆಂಬುದನ್ನು ನಾವು ಇಲ್ಲೀ ಗಮನಿಸಬಹುದಾಗಿದೆ.

ಕನಕದಾಸರು 16ನೆಯ ಶತಮಾನದಲ್ಲಿ ಎಂದರೆ ಸುಮಾರು ಕ್ರಿ. ಶ. 1508 ರಿಂದ 1606 ರವರೆಗೆ ತುಂಬು ಜೀವನವನ್ನು ನಡೆಸಿದವರು. ಧಾರವಾಡ ಜಿಲ್ಲೆಯ ಬಾಡ ಗ್ರಾಮದ ಬೀರಪ್ಪ–ಬಚ್ಚಮ್ಮರ ಪ್ರತಿಭಾನ್ವಿತ ಚಿರಂಜೀವಿಗಳು. 'ತಿಮ್ಮಪ್ಪ' ಎಂಬುದು ತಂದೆತಾಯಿಗಳು ಇಟ್ಟ ಹೆಸರಾದರೆ, ಹೂತಿಟ್ಟ ನಿಧಿಯನ್ನು ಕಂಡುದರಿಂದ 'ಕನಕ' ಎಂಬ ಹೆಸರು ಅವರಿಗೆ ಪ್ರಚಲಿತವಾಯಿತು. ಕನಕ, ಸಂಸಾರಸ್ಥನಾಗಿ ಸಂಸಾರವನ್ನು ಅಚ್ಚುಕಟ್ಟಾಗಿ ನಡೆಸಿದ ಪಾಳೆಯಗಾರನಾಗಿ ದಕ್ಷ ಆಡಳಿತಗಾರನೆನ್ನಿಸಿಕೊಂಡ. ಸತತವಾದ ಅಭ್ಯಾಸ ಹಾಗೂ ಚಿಂತನಗಳಿಂದಲೂ ವಿಶಾಲವಾದ ಜೀವನಾನುಭವಗಳಿಂದಲೂ 'ಕನಕ' ದಿವ್ಯಜ್ಞಾನವನ್ನು ಪಡೆದು 'ಕನಕದಾಸ'ರಾಗಿ ಹರಿದಾಸಸಾಹಿತ್ಯದಲ್ಲಿ ಸ್ವತಂತ್ರ ಕಾಂತಿಯಿಂದ ಗಣ್ಯಸ್ಥಾನವನ್ನು ಪಡೆದರು.

ಭಕ್ತಿಗೀತೆಗಳ ಜೊತೆಗೆ, 'ಮೋಹನ ತರಂಗಿಣಿ' 'ನಳಚರಿತ್ರೆ' 'ರಾಮಧ್ಯಾನ ಚರಿತೆ' 'ಹರಿಭಕ್ತಿ ಸಾರ' ಎಂಬ ಕಾವ್ಯಕೃತಿಗಳನ್ನು ವರ್ಣಕ ಪರಂಪರೆಗನುಸರಿಸಿ ಕನ್ನಡ ಸಾಹಿತ್ಯ ಸರಸ್ವತಿಯನ್ನು ಕನಕದಾಸರು ಶ್ರೀಮಂತಗೊಳಿಸಿದರು. ಮೋಹನ ತರಂಗಿಣಿಯು 1800 ನುಡಿಗಳಿಂದ ಕೂಡಿದ, ಅವರ ಕೃತಿಗಳಲ್ಲಿಯೇ ಹಿರಿದಾದ ಗಾತ್ರದ ಸಾಂಗತ್ಯ. ಅದರಲ್ಲಿ ಅಡಕವಾಗಿರುವ ವಿಷಯವೆಂದರೆ, 'ಪುಸರ ದಹನ, ಕಾಮೋತ್ಪತ್ತಿ, ವರ ಶಂಬರಾಸುರ ವಧೆ, ಕಂತುಸುತನ ಭಾಸುರಲೀಲೆ ಬಾಣನ ಗೆದ್ದ ಜಯ ಲಕ್ಷ್ಮೀಶನ ಕೃತಿ..... ...' 'ನಳಚರಿತೆ'ಯು ಭಾಮಿನೀ ಷಟ್ಪದಿಯ 480 ನುಡಿಗಳಿಂದ ಕೂಡಿದ ಮಹಾಭಾರತದ ವನಪರ್ವದೊಳಗಿನ ನಲೋಪಾಖ್ಯಾನದ ಕಥೆ; 'ರಾಮಧ್ಯಾನ ಚರಿತೆ' ಭಾಮಿನೀ ಷಟ್ಪದಿಯ 156 ನುಡಿಗಳಿಂದ ಕೂಡಿದ ಖಂಡಕಾವ್ಯ. ಸ್ವತಂತ್ರ ಕಲ್ಪನೆಯ ಕಾವ್ಯಧ್ವನಿಪೂರ್ಣ ವಿಡಂಬನಾಕೃತಿ. ರಾಗಿ (ನರದಲಿಗ) ಬಡವರನ್ನು ಪ್ರತಿನಿಧಿಸಿದರೆ ವ್ರೀಹಿ (ಬತ್ತ) ಶ್ರೀಮಂತರನ್ನು ಪ್ರತಿನಿಧಿಸುತ್ತದೆ. ಇವರಿಬ್ಬರ ಸಂವಾದ ಕನ್ನಡ ಸಾಹಿತ್ಯದಲ್ಲಿಯೇ ಅಪರೂಪ ಹಾಗೂ ಮೇರು ಪ್ರತಿಭೆಯ ಕಾಣಿಕೆ. 'ಹರಿಭಕ್ತಿಸಾರ'ವು ಭಾಮಿನೀ ಷಟ್ಪದಿಯ 110 ನುಡಿಗಳಿಂದ ಕೂಡಿದ ಪಾರಾಯಣಯೋಗ್ಯ ದೇವ ಪ್ರಾರ್ಥನಾ ಕಾವ್ಯ. ಭಕ್ತಿಯ ಉತ್ಕಟತೆ ಹಾಗೂ ಪರಿಪೂರ್ಣಸ್ಥಿತಿಗಳಿಂದ ಅಭಿವ್ಯಕ್ತಿಗೊಂಡ ಕೃತಿ; ಇವುಗಳಲ್ಲದೆ. 'ನೃಸಿಂಹಸ್ತವ' ಎಂಬ ಚಿಕ್ಕ ಸಾಂಗತ್ಯವನ್ನು ಕನಕದಾಸರೇ ಬರೆದರೆಂಬಂತೆ ಕವಿಚರಿತೆಕಾರರು ಅಭಿಪ್ರಾಯ ಪಟ್ಟಿದ್ದಾರೆ.

'ಕನಕದಾಸರ ಕಾವ್ಯಕೃತಿಗಳಷ್ಟೇ ಒಂದು ಗಟ್ಟಿಮುಖವಾದರೆ ಅವರ ಭಕ್ತಿಗೀತೆಗಳದ್ದೇ ಮತ್ತೊಂದು ಗಟ್ಟಿಮುಖ. ಒಂದೇನಾಣ್ಯದ ಎರಡು ಮುಖಗಳಿದ್ದಂತೆ. ಅವರ ಭಕ್ತಿ ಗೀತೆಗಳಲ್ಲಿ ಭಕ್ತಿತರಂಗಿಣಿಯು ಅಖಂಡವಾಗಿ ಸೂಸಿ ಹರಿಯುವವನ್ನು ಕಾಣಬಹುದಾಗಿದೆ. ಭಾಗವತ, ರಾಮಾಯಣ, ತತ್ತ್ವಜ್ಞಾನ, ಜೀವನಾನುಭವಗಳಿಂದ ಕೂಡಿ ಅವರ ವಾಙ್ಮಯತಪಸ್ಸು ಅಲ್ಲಿ ಪಾಕಗೊಂಡು ಸಶಕ್ತಧ್ವನಿರೂಪಕಗಳಿಂದ ಸಾರ್ಥಕ್ಯ ಪಡೆದಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಅವರ ಈ ಭಕ್ತಿಗೀತೆಗಳನ್ನು ಸ್ತೋತ್ರ, ನಾಮಸಂಕೀರ್ತನೆ, ಆತ್ಮನಿವೇದನೆ, ಸಮಾಜವಿಮರ್ಶೆ, ಲೋಕನೀತಿಗಳೆಂಬ ಉಪಶೀರ್ಷಿಕೆಗಳಲ್ಲಿ ಸಂಗ್ರಹಿಸಬಹುದಾಗಿದೆ.



ಕನಕದಾಸರು

ಡಾ॥ ವಸಂತಕುಷ್ಟಗಿ

ಸ್ತೋತ್ರಪರಗೀತೆಗಳು ಗಣಪತಿ,ಹನುಮಂತರಾಯ ವಾಗ್ದೇವಿ, ಪರಮಾತ್ಮ ಮೊದಲಾದವರು ಆತ್ಮೀಯರೆಂಬ ಭಾವನೆಯನ್ನು ಪ್ರಕಾಶಗೊಳಿಸುತ್ತವೆ. ದೇವರ [illegible] ಪರಮಾತ್ಮ ಇವರೆಲ್ಲ ಭಕ್ತಿ ಪರಿಭಾ [illegible] ಭಾವನೆಗಳನ್ನು [illegible]. ಎಲೆಂಬ, "[illegible] ಕೀರ್ತಿ [illegible]" ಎಂಬ [illegible] ಸ್ತುತಿಯು [illegible] [illegible] ಕನ್ನಡವನ್ನು [illegible].

ಕನಕದಾಸರ [illegible] ಅಲ್ಲಿ ಸುಂದರವಾದ ಭಾವಗಳು [illegible] ಭಾವನೆಯು ಚೌಕಟ್ಟಿನಲ್ಲಿ ಅನಂತಕಾಲವೂ ನಿಲೆಯಾಗಿ ನಿಲ್ಲುವ ಶಕ್ತಿಯನ್ನು ಹೊಂದಿವೆ. ಅನೇಕ ಸಲ ಪ್ರತಿಭೆಯ ಕುಲುಮೆಯಲ್ಲಿ ನವ ಕಲ್ಪನೆಗಳು ಚೈತನ್ಯಪೂರ್ಣವಾಗಿ ರಾರಾಜಿಸತೊಡಗುತ್ತವೆ. "ಎನೆಂದು ಕೊಂಡಾಡಿ ಸ್ತುತಿಸುವೆನೋ ದೇವ" "ಆದಿವಂದಿತವಾದ"ಗಳಲ್ಲಿ ಪರಮಾತ್ಮನನ್ನು ಕೊಂಡಾಡಿರುವ ಶೈಲಿಯು ಅತ್ಯಂತ ಭಾವಪೂರ್ಣವಾದದ್ದು. ಅಲ್ಲಿ ನಿರೂಪಿತವಾಗಿರುವ ಪರಮಾತ್ಮನ ಮಹಿಮೆಗಳಿಗೆ ಮಾರುಹೋಗುವ ಸಾಧನಾ ಜೀವಿಯ ಮನಸ್ಸು, ಮುಕ್ತಿ ಸಾಧನೆಯತ್ತ ನಾಗಾಲೋಟದಿಂದ ಸಾಗತೊಡಗುತ್ತದೆ.

ಆರ್ತ ಭಕ್ತಿಯು, ಆತ್ಮನಿವೇದನೆಯು ಗೀತೆಗಳಲ್ಲಿ ಅಚಲಿತನಾದ ಪರಮಾತ್ಮನನ್ನು ಆಕರ್ಷಿಸುವ ಲೋಹಚುಂಬಕತ್ವವಾಗಿದೆ. ಅಂತಹ ಗೀತೆಗಳ ಶಿಲ್ಪ, ಸರಳವೂ ಸುಂದರವೂ ಆಗಿರುವುದರಿಂದ ಅಲ್ಲಿ ಅರ್ಥಕ್ಕೆ ತಪ್ಪುಹುಡುಕಬೇಕಾಗಿಲ್ಲ. "ತನು ನಿನ್ನದು ಜೀವನ ನಿನ್ನದು" ಎಂಬ ಗೀತೆಯು ಸಂಪೂರ್ಣ ಸೃಷ್ಟಿಯ ಆಗು–ಹೋಗುಗಳಿಗೆ ಆತನೊಬ್ಬನೇ ಕಾರಣಕರ್ತನೆಂದೂ, ಆತನೊಬ್ಬನೇ ಸರ್ವತಂತ್ರ ಸ್ವತಂತ್ರನೆಂದೂ, ಆತನೊಬ್ಬನೇ ಸೃಷ್ಟಿಯ ರಕ್ಷಕನೆಂದೂ ದೃಢೀಕರಿಸುತ್ತದೆ. ಅಂತೆಯೇ "ತಲ್ಲಣಿಸದಿರು ಕಂಡ್ಯ ತಾಳು ಮನವೆ" ಎಂಬ ಸ್ವಾಂತನ ಇನ್ನೊಂದು ಗೀತೆಯಲ್ಲಿ. "ನೀನುಮಾಯೆಯೊಳಗೊ ನಿನ್ನೊಳು ಮಾಯೆಯೋ" ಎಂಬ ಒಗಟಿನ ಪರಿಹಾರ ಮತ್ತೊಂದರಲ್ಲಿ. ಕೊನೆಗೆ ಭಕ್ತಿಯ ತುತ್ತತುದಿಗೆ ಮುಟ್ಟಿ 'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ' ಎಂಬ ಅನುಮಾನವಿಲ್ಲದ ನಿವೇದನೆಯ ಗೀತೆ. ಈ ಎಡೆಗಳಲ್ಲೆಲ್ಲ ಗೀತೆಗಳು, ಸುಂದರವಾದ ಭಾವಗೀತೆಗಳ ಸತ್ತ್ವದೊಡನೆ ಸಾಹಿತ್ಯಾಂಶಗಳಿಂದ ಕೂಡಿ ಜನಪ್ರಿಯವಾಗಿರುವುದೆಂಬುದು ಗಮನಾರ್ಹ. [illegible] ಬಂದಿ [illegible] ವಾಸುದೇವ [illegible] [illegible] ಸಾಧನಾ [illegible] [illegible] [illegible] ನಿಂದ [illegible] [illegible] ಗಳು [illegible] ಸಾಧನೆ [illegible].

ಕನಕದಾಸರ ಗೀತೆಗಳನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವರು ಹಂಬಲಿಸಿದ್ದು ಮುಕ್ತಿ ಎಂಬುದನ್ನೇ ಎಂದು ಎದ್ದುಕಾಣುತ್ತದೆ. ಅದೂ ಇದೇ ಜನ್ಮದಲ್ಲಿ ಸಾಧ್ಯವಾಗಬೇಕೆಂಬ ಬಯಕೆ ಇಚ್ಛೆಯು ಜೇರೆ ಅವಕ್ಕೆಂದೇ "ಹಣ್ಣ ಸಿಂಗದ ಮನ್ನ ಹರಿಯ ಸೇವೆಯು ಮಾಡು ಪರಲೋಕ ಸಾಧನವನು ಮಾಡು" ಎಂಬ ಕರೆಯನ್ನು ನೀಡುತ್ತಾರೆ. ಆ ಬಗೆಯ ಸಾಧನೆಗೆ, ವೈರಾಗ್ಯದಿಂದ ಯತಿಯಾಗಿ ಸಂಸಾರವನ್ನು ತ್ಯಜಿಸುವ ಆವಶ್ಯಕತೆಯಿಲ್ಲ; ತೀರ್ಥಯಾತ್ರೆಗಳನ್ನಾಡಿ ನೀರಿನಲಿ ಮುಳುಗುಹಾಕಿ ಬಳಲಬೇಕೆಂದಿಲ್ಲ, ಕೇವಲ ಕಂಸಾರಿಯೆಂಬ ನಾಮವೊಂದೇಸಾಕು; ಹೀಗೆ ಶ್ರದ್ಧೆಯಿಂದ ಆತನ ನಾಮವನ್ನು ನಂಬಿದರೆ ಆತನು 'ಬಂಟನಾಗಿ ಬಾಗಿಲ ಕಾಯ್ವ'ನು. ತನಗೆ 'ಜೂಜ ಕಲುಕಲ ಮನೆಗೆ ಹುಲ್ಲುತರುವ'ಂತಹ ನಾಮಾನ್ಯ ಕೆಲಸವನು ಸಂಕೋಚವಿಲ್ಲದೆ ಮಾಡಿ ತನ್ನ ಭಕ್ತರ ಬಲವನ್ನು ಇಮ್ಮಡಿಗೊಳಿಸುವನು. 'ಅಣುಮಹತ್ತನೊಳೆಲ್ಲ ಪರಿಪೂರ್ಣ ವಿಶ್ವನುಡುಸಾರ ಕಾಣಿಸಿ ಘನಸ್ವಭಾವ'ನ್ನು ಮೂಡುವನು. ಆ ದರ್ಶನವೇ ಲೋಕಸಂಪಾದನೆಯ ಮಂಗಲ ಮುಹೂರ್ತ. ಅದರ ತಿಳಿವಳಿಕೆಯನ್ನು ನಾಮಾನ್ಯವಾಗಿ ಎಲ್ಲ ಗೀತೆಗಳೂ ನಿಚ್ಚಳವಾಗಿ ನೀಡುತ್ತವೆ.

ಕನಕದಾಸರು ತಮಗಿರುವ ಪರಿಪಕ್ವವಾದ ಪ್ರಪಂಚಾನುಭವದ ಬಲದಿಂದ ಹಲವಾರು ಗೀತೆಗಳಲ್ಲಿ ಅಂದಿನ ಸಮಾಜವನ್ನು ವಿಮರ್ಶೆಮಾಡಿ, ಉತ್ತಮವಾದ ಲೋಕನೀತಿಯನ್ನು, ನೀಡಿದ್ದಾರೆ. ಅಂತಹ ಗೀತೆಗಳಲ್ಲಿ ಅಂದಿನ ಸಮಾಜದಲ್ಲಿಯ ದಂಭಾಚಾರ, ಅನ್ಯಾಯ, ಅಸತ್ಯಗಳನ್ನು ಮುಚ್ಚು ಮರೆಯಿಲ್ಲದೆ ಹರಿತವಾದ ಮಾತುಗಳಿಂದ ಖಂಡನೆ ಮಾಡಿದ್ದಾರೆ. ಅಲ್ಲಿಯ ಅವರ ಕೆಲವು ನುಡಿಗಳಲ್ಲಿ ತೀವ್ರಗತಿಯ ಪರಿಣಾಮವು ಹಿರಿದಾದ ಅರ್ಥ [illegible] ಹೊಂದುತ್ತವೆ. ಅನೇಕ ಸಲ [illegible] [illegible] [illegible], "[illegible] [illegible] [illegible] [illegible] [illegible]" [illegible], "[illegible] [illegible]", "[illegible] [illegible]" ಎಂದು [illegible] [illegible] [illegible] ತೀವ್ರ [illegible] [illegible] [illegible] [illegible] ಶಕ್ತಿಯುತ [illegible] ಕುಲದ ಮಾತು, [illegible] ದಾಸರು "ಕುಲಕುಲ ಕುಲವೆನ್ನುವುದು ಸರಿಯಲ್ಲ" – ಈ ತಾರತಮ್ಯ ಕೂಡದೆಂದು ಕೌಂಡಿಲ್ಯ, ಪರಾಶರ, ವಸಿಷ್ಠ, ಕಾಶ್ಯಪ ಮೊದಲಾದವರ ನಿದರ್ಶನಗಳಿಂದ ತಮ್ಮ ವಿಶಾಲ ದೃಷ್ಟಿಯನ್ನು 'ಆತನೊಲಿದಕುಲ' ಎಂಬ ಗೀತೆಯಲ್ಲಿ ಸ್ಪಷ್ಟಪಡಿಸಿ ಕುಲವಿಚಾರವನ್ನು ಖಂಡಿಸಿದ್ದಾರೆ. ಅಲ್ಲಿ "ಆತ್ಮನಾವಕುಲ ಜೀವನಾವಕುಲ ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ" ಎಂದು ಪ್ರಶ್ನಿಸಿ "ಕಾಗಿನೆಲೆಯಾದಿ ಕೇಶವ ನೊಲಿದ ಭಕ್ತರಿಗೆ ಕುಲವಾವುದು ಹೇಳಿರಯ್ಯಾ" ಎಂದು ಸಮರ್ಪಕವಾದ ಉತ್ತರವನ್ನು ನೀಡಿದ್ದಾರೆ. ಅದರಂತೆ ಜಗತ್ತಿನಲ್ಲಿ ದೇವನು ಒಬ್ಬನೇ ಎಂಬುದನ್ನು "ದೇಸೆಗೆಟ್ಟು ನಾಡದೈವಂಗಳಿಗೆ ಹಲುಬಿದರೆ ನೊಸಲ ಬರೆಹವ ತೊಡೆದು ಕಿದ್ದಬಲ್ಲವೇ?" ಎಂದು ಪ್ರಶ್ನಿಸಿ "ವಸುಧೀಶ ಕಾಗಿನೆಲೆಯಾದಿ ಕೇಶವನಂಘ್ರಿ ಬಿಸಜವನು ಕಂಡು ನೀ ಸುಖಿಯಾಗು ಮನುಜಾ" ಎಂದು ಪರಮಾತ್ಮ ನೊಬ್ಬನನ್ನೇ ನಂಬಬೇಕೆಂದು ವಿವೇಕವನ್ನು ಹೇಳುತ್ತಾರೆ "ದುರ್ಜನರ ಸಂಗವನು ಎಂದಿಗೊಲ್ಲೆನು" ಎಂಬ ಗೀತೆಯಲ್ಲಿಯಂತೂ ಲೋಕನೀತಿಯು ನೇರವಾಗಿ ಸಾಧಕನನ್ನು ಎಚ್ಚರಿಸಿ ನಡೆಸುತ್ತದೆ. "ನೋಡಿ ನುರುಳಾಗದಿರಿ ಪರಸತಿಯ" ಎಂಬ ಗೀತೆಯು ಅಷ್ಟೇ ಪ್ರಭಾವಕಾರಿಯಾಗಿರುವ ಈ ಮಾದರಿಯ ಗೀತೆ ಅಲ್ಲಿ, ನಹುಷ ಇಂದ್ರ, ಕೀಚಕ, ದಶಕಂಠ, "ಇಂತಿಂಥವರು ಕೆಟ್ಟುಹೋದರೆಂಬುದನರಿತು ಭ್ರಾಂತಿಯನೆ ಬಿಟ್ಟು ಭಯಭಕ್ತಿಯಿಂದ ಕಂತುಪಿತ ಕಾಗಿನೆಲೆಯಾದಿ ಕೇಶವನ ನಿರಂತರದಿ ಭಜಿಸಿ ನಿತ್ಯ ಸುಖಿಯಾಗ

ಕಿಂಡಿಯು ಒಡೆದು ನಮ್ಮ ಅಂತಃ ಚೇತನವು ಜ್ಞಾನದ ಕತಲಾಗಿಯೇ ಬಿಡುತ್ತದೆ.

ಕನಕದಾಸರು ಕರ್ನಾಟಕದ ಭಕ್ತಿಪರಂಪರೆಯಲ್ಲಿಯೇ, ಪುರಂದರ ದಾಸರಂತೆ ಶ್ರೇಷ್ಠರು. ಪುರಂದರದಾಸರು 'ಕರ್ನಾಟಕ ಸಂಗೀತ' ವನ್ನೇ ಜಗತ್ತಿಗೆ ಕಾಣಿಕೆಯಾಗಿ ಕೊಟ್ಟರೆ, ಕನಕದಾಸರು ಅನೇಕ ಕೃತಿಗಳನ್ನು ಆ ಕರ್ನಾಟಕ ಸಂಗೀತಕ್ಕೆ ಕಾಣಿಕೆಯಾಗಿ ಕೊಟ್ಟಿದ್ದಾರೆ. ಅಷ್ಟೇ ಅಲ್ಲದೆ, ಶುದ್ಧ ಬಗೆಯ ಭಾವ, ಶಬ್ದಜೋಡಣೆ, ಅರ್ಥ ಮತ್ತು ಸ್ವರ ಇವುಗಳ ಸರಿಯಾದ ಸಂಯೋಜನೆಯಿಂದ, ಸರ್ವಾಂಗ ಸುಂದರವಾದ ಶಾಸ್ತ್ರೀಯ ಕರ್ನಾಟ ಸಂಗೀತದ ಮುಖಾಂತರ ಉಡುಪಿಯ ಶ್ರೀ ಕೃಷ್ಣನ ಮಂದಿರದ ಪಶ್ಚಿಮಭಾಗದ ಗೋಡೆಯಲ್ಲಿಬಿರುಕು ಕಾಣಿಸಿದುದಲ್ಲದೆ, ಶ್ರೀ ಕೃಷ್ಣನ ಮೂರುತಿ ಆ ದಿಕ್ಕಿಗೆ ಹೊರಳಿ ಕನಕದಾಸರಿಗೆ ದರ್ಶನಕೊಟ್ಟುದುದು ಚಮತ್ಕಾರವಲ್ಲವೆ? ಅದು ಸಾಹಿತ್ಯ ಮತ್ತು ಸಂಗೀತಗಳ ಸಾಂಗತ್ಯದಿಂದ ಸಾಧ್ಯವೆಂದು ತೋರುತ್ತದೆ. ಅದನ್ನು ಕನಕದಾಸರು ಸಾಧಿಸಿದ್ದರು. ಆ ಮುಖಾಂತರ ಕರ್ನಾಟಕದ ಜನತೆಗೆ ಭಾಗ್ಯದ ಕಿಂಡಿಯನ್ನು ತೋರಿಸಿದರು. ಆ ಭಾಗ್ಯದ ಭಕ್ತಿಗೀತೆಯೆಂದರೆ, 'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೆ' ಎಂಬುದು. ಅದನ್ನು ಇಂದಿಗೂ ಹಾಡಿದಾಗ ಅವ್ಯಕ್ತವಾದ 'ದಿವ್ಯ' ದರ್ಶನ ಅನುಭವವು ಆಗದೇ ಇರದು ಅಂತಹ ಅನೇಕ ಸತ್ವಯುತ ಗೀತೆಗಳನ್ನು ಅವರ ಸಂಗ್ರಹದಲ್ಲಿ ಕಾಣಬಹುದು. ಆ ಗೀತೆಗಳೆಲ್ಲ ಪುರಂದರದಾಸರ ಗೀತೆಗಳ ಜೊತೆಗೆ ಸಮಸ್ಪರ್ಧಿಯಾಗಬಲ್ಲವು. ಅಷ್ಟೇ ಅಲ್ಲ, ಕನಕದಾಸರ ಗೀತೆಗಳೆಲ್ಲ ಕಾವ್ಯಗುಣ ಪ್ರಧಾನವಾಗಿರುವುದನ್ನು ನೋಡಬಹುದು. ಪುರಂದರದಾಸರ ಕೀರ್ತನೆಗಳಲ್ಲಿ "ಮುಖ್ಯವಾದ ಕಾವ್ಯಗುಣ ಕೇವಲ ಪಲ್ಲವಿಯಲ್ಲಿ ಮಡುಗಟ್ಟಿ, ಉಳಿದ ಚರಣಗಳಲ್ಲಿ ಅದರ ಸಮರ್ಥನೆಯ ತರ್ಕವಾಗಿಯೋ ಅಥವಾ ಪಲ್ಲವಿಯಲ್ಲಿನ ಧ್ವನಿಯನ್ನು ವಾಚ್ಯವಾಗಿ ವಿವರಿಸುವ ಪದ್ಧತಿಯಲ್ಲಿಯೋ ಪರ್ಯಾವಸಾನ" ವಾದರೆ, ಕನಕದಾಸರಲ್ಲಿ ಅದು ವಿಚಾರದ ತಾನವಿತಾನಗಳೊಡನೆ ತಾತ್ತ್ವಿಕ ಜಿಜ್ಞಾಸೆಯನ್ನೂ ಸೌಂದರ್ಯ ಜಿಜ್ಞಾಸೆಯನ್ನು ನೀಡಿ ಅಂತಿಮದಲ್ಲಿ ಈ ಲೋಕದ ಮೂಲಭೂತದ ವಿಸ್ಮಯದ ಹೊಳಹಿನಲ್ಲಿ ನಿಲುಗಡೆಯನ್ನು ಒದಗಿಸುವುದಾಗಿದೆ. ಅಂತೆಯೇ ವ್ಯಾಸರಾಯರು ಕೂಡ ಕನಕದಾಸರನ್ನು ಬಹುವಾಗಿ ಮೆಚ್ಚಿಕೊಂಡರು. ಕನಕದಾಸರ ಹಿರಿಮೆಯನ್ನು ಪುರಂದರದಾಸರು ತಮ್ಮ ಒಂದು ಗೀತೆಯಲ್ಲಿ "ನೋಡಿದರೆ ಈ ಕನಕನಾಡುವ ಮಾತುಗಳ ಮೂಢಜನರರಿಯ ಬಲ್ಲರೆ ನಾಡೆಲ್ಲ ಹುಡುಕಿದರು ಈತಾರ ಕಾಣೆ" ಎಂದು ಹಾಡಿಹರಸಿದ್ದಾರೆ. ಹೀಗೆ ಗುರುಕಾರುಣ್ಯವನ್ನು ಪಡೆದ ಕನಕದಾಸರ ಬಾಳು ಪರಿಪೂರ್ಣ. ಅವರು ನೀಡಿದ ಸಾಹಿತ್ಯವೆಲ್ಲ ಉಪನಿಷತ್ಕಾವ್ಯ. ಸಂಗೀತ, ಸಾಹಿತ್ಯ, ವೇದಾಂತಗಳಿಂದ ಕೂಡಿದ ಅನುಭಾವದ ನವನೀತ.

ಕನ್ನಡ ಸಾಹಿತ್ಯದಲ್ಲಿ ನಿಜಗುಣರು, ಪುರಂದರ ದಾಸರು, ಸರ್ಪಭೂಷಣರಂತೆ, ಕನಕದಾಸರೂ ಕೂಡ ಶ್ರೇಷ್ಠ ಅನುಭಾವಿಕವಿಗಳು. ಅವರು ಪರಮಾತ್ಮನಿಂದಲೇ ನೇರವಾಗಿ ಮಾರ್ಗದರ್ಶನ ಪಡೆದವರು. ಸ್ವಪ್ನದಲ್ಲಿ ಆದಿಕೇಶವ ರೂಪಿ ಪರಮಾತ್ಮನನ್ನು ವೆಂಕಟೇಶನ, ಚೆನ್ನಕೇಶವನ ಉಡುಪಿಯ ಕೃಷ್ಣನ ರೂಪಗಳಲ್ಲಿ ಕಂಡು ದಿವ್ಯಾನುಭವವನ್ನು ಪಡೆದವರು. "ಕಣ್ಣೆ ಕಾಮನ ಬೀಜ–ಈ ಕಣ್ಣಿಂದಲೆ ನೋಡೋ ಮೋಕ್ಷ ಸಾಮ್ರಾಜ್ಯ ಕಣ್ಣಿನ ಮೂರುತಿ ಬಿಗಿದು – ಒಳ ಗಣ್ಣಿನಿಂದಲೆ ದೇವರ ನೋಡಣ್ಣ". 'ಎಲ್ಲಿ ನೋಡಿದರೆ ಅಲ್ಲಿ ರಾಮ'ನನ್ನು ಕಂಡವರು. "ಬಯಲು ಆಲಯದೊಳಗೊ ಆಲಯದೊಳಗೆ ಬಯಲೊ ಬಯಲು ಆಲಯವೆರಡು ನಯನದೊಳಗೊ ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ" ಎನ್ನುವುದನ್ನು ಮನಗಂಡು "ಬದುಕಿದೆನು ಬದುಕಿದೆನು ಭವ ಹಿಂಗಿತು ಪದುಮನಾಭನ ಪಾದದೊಲುಮೆ ಎನಗಾಯಿತು ತಂದೆಕೇಶವರಾಯ ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ"–ಎಂಬುದನ್ನು ಅನುಭವಿಸಿ ಹಿಗ್ಗಿದವರು. "ಸರ್ವಂಖಲು ಇದಂ ಬ್ರಹ್ಮ" ಎಂಬ ಉನ್ನತವಾದ ಅನುಭಾವವನ್ನು ಪಡೆದವರು. ಆ ಅನುಭಾವದ ಸ್ವಾದವನ್ನು ತಮ್ಮ ಗೀತೆಗಳ ಮುಖಾಂತರ ಹಾಡಿ ನಾಡವರನ್ನು ಪುನೀತಗೊಳಿಸಿದ ಪುಣ್ಯವಂತರು. ★

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ. ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

# ಪ್ರಸನ್ನ ವೆಂಕಟದಾಸ ಪ್ರಶಸ್ತಿ

ಕನ್ನಡ ಭಾಷೆ ಹಾಗೂ ಸಾಹಿತ್ಯಗಳಿಗೆ ಅಮೂಲ್ಯ ಕಾಣಿಕೆಗಳನ್ನು ನೀಡಿರುವವರಲ್ಲಿ ಹರಿದಾಸರಿಗೆ ಒಂದು ಉನ್ನತಸ್ಥಾನವಿದೆ. ಸರಳ–ಸುಂದರವಾದ ಭಾಷೆಯಲ್ಲಿ ದ್ವೈತ ಸಿದ್ಧಾಂತ ತತ್ತ್ವಗಳನ್ನು ಪರಿಪೂರ್ಣವಾಗಿ ಮೂಡಿಸಿದವರು ಹರಿದಾಸರು. ಇವರು ರಚಿಸಿದ ಸಾಹಿತ್ಯಕ್ಕೆ ಸಂಗೀತದ ಜೋಡು, ಚಂದನಕ್ಕೆ ಪರಿಮಳವನ್ನು ಜೋಡಿಸಿದಂತೆ ಈ ಹಾಡುಗಳು ಜನಸಾಮಾನ್ಯರ ಹೃದಯವನ್ನು ಹೊಕ್ಕು ಸಂತೃಪ್ತಿಯನ್ನು ಉಂಟುಮಾಡಿದುವು; ತತ್ತ್ವಕ್ಕೂ ಜನಸಾಮಾನ್ಯಕ್ಕೂ ನೇರಸಂಬಂಧವನ್ನುಂಟುಮಾಡಿ ಅವರ ಮೇಲೆ ಅಪಾರ ಪ್ರಭಾವವನ್ನುಂಟುಮಾಡಿವೆ. ಅಂತೆಯೇ ಇಂದಿಗೂ ಹರಿದಾಸರ ಕೀರ್ತನೆಗಳೂ, ಕಾವ್ಯಗಳೂ ಜನತೆಯ ಹೃದಯವನ್ನು ಪರಿವರ್ತಿಸಲು ಸಮರ್ಥವಾಗಿವೆ.

"ಪ್ರಪಂಚದ ಅನುಭಾವಿಗಳಲ್ಲಿ ಕರ್ನಾಟಕದ ಭಕ್ತಶ್ರೇಷ್ಠರು ಹಿರಿಯ ಸ್ಥಾನವನ್ನು ಹೊಂದಿದ್ದಾರೆ. ವಿವರಪೂರ್ಣವಾಗಿ ಸಚಿತ್ರವಾಗಿ ಬಣ್ಣಿಸಿರುವ ಅಪರೋಕ್ಷಾನುಬಂಧ ಸಾಧನೆಯಲ್ಲಿ ಕರ್ನಾಟಕದ ಸಂತರನ್ನು ಮೀರಿಸಿದವರಾರೂ ಇಲ್ಲ" ಎಂಬ ಡಾ॥ ಆರ್. ಡಿ. ರಾನಡೆಯವರ ಮಾತು ಈ ಸಾಹಿತ್ಯದ ಹಿರಿಮೆಯನ್ನು ತಿಳಿಸಬಲ್ಲುದು.

ದ್ವೈತ ಸಿದ್ಧಾಂತವು ಹೇಳುವಂತೆ ಭಗವಂತನು ಸರ್ವತಂತ್ರ–ಸ್ವತಂತ್ರ;

"ಹರಿ ಪರತರಃ ಸತ್ಯಂ ಜಗತ್,<br>
ಭಿನ್ನಾ ಜೀವಗಣಾಃ<br>
ಹರೇರನುಚರಾಃ; ನೀಚೋಚ್ಚಭಾವಂ।<br>
ಮುಕ್ತಿರ್ನೈಜಸುಖಾನುಭೂತಿರಮಲಾ<br>
ಭಕ್ತಿಶ್ಚ ತತ್‌ಸಾಧನಮ್ ॥"

ಎಂಬುದನ್ನು ಸಾರುವ ಕನ್ನಡದ ಈ ಹಾಡುಗಳು ಪ್ರಪಂಚವನ್ನು ಅಲ್ಲಗಳೆಯುವುದಿಲ್ಲ. ಅದು ಮಾನವನ ನಾಶಕ್ಕೆ ಕಾರಣವೆಂದು ಹೇಳುವುದಿಲ್ಲ. ಈ ಪ್ರಪಂಚದ ಸೃಷ್ಟಿಗೆ ಕಾರಣನಾದ ಪರಮಾತ್ಮನು ಪ್ರತಿಯೊಂದು ವಸ್ತುವಿನಲ್ಲಿಯೂ, ಜೀವಿಯಲ್ಲಿಯೂ ಇದ್ದಾನೆ. ಅವನು ಆಡಿಸಿದಂತೆ ಆಡುವ ಗೊಂಬೆಗಳು ಇವೆಲ್ಲವೂ. ಭಗವದ್ಭಕ್ತರಿಗೆ ಹರಿದಾಸರಿಗೆ ಯಾವ ಭಯವೂ ಇಲ್ಲ. ಇವರು ಸಂಸಾರದ ಮೂಲಕವೇ ಮೋಕ್ಷಮಾರ್ಗದಲ್ಲಿ ಅಡಿಯಿಡುವವರು. ಇವರು ನಿರಾಶಾವಾದಿಗಳಲ್ಲ. ಪ್ರಪಂಚದ ಎಡರು – ತೊಡರುಗಳು ಅಧ್ಯಾತ್ಮ ಸಾಧನೆಗೆ ಆತಂಕವಾಗಿಲ್ಲ. ಸಮಚಿತ್ತ ಹಾಗೂ ನಿರ್ಲಿಪ್ತ ಭಾವಗಳನ್ನು ಬೆಳೆಸಿಕೊಂಡ ಮಹಾತ್ಮರು ಇವರು.

ಇಡೀ ಸಮಾಜದ ಉನ್ನತಿಗಾಗಿ ಹರಿದಾಸರು ಚಿಂತಿಸಿದರು. ಅಂತೆಯೇ ಧರ್ಮ–ನೀತಿಗಳಿಗೆ ಹೊಂದುವ ಸದಾಚಾರವನ್ನು ಹಾಡುಗಳ ಮೂಲಕ ಜನರಿಗೆ ತಿಳಿಹೇಳಿದರು. ಬಾಹ್ಯಾಡಂಬರ, ಸಂಸಾರಸುಖದ ಅತ್ಯಾಶೆಗಳನ್ನು ಖಂಡಿಸಿದರು. ಭಗವದ್ಭಕ್ತಿ, ಅಧ್ಯಾತ್ಮಸಾಧನೆಗಳಿಗೇ ಮಹತ್ವವನ್ನಿತ್ತರು. ಸಂಸಾರವು ಉನ್ನತ ಧ್ಯೇಯ ಸಾಧನೆಗೆ ಸಹಾಯಕವಾಗುವ ಸೋಪಾನವೆಂದರು. ಅವರವರ ಯೋಗ್ಯತೆಗನುಗುಣವಾಗಿ ಪೂರ್ಣವಿಕಾಸಕ್ಕೆ ಈ ಪ್ರಪಂಚವು ಅವಕಾಶವನ್ನೀಯುತ್ತದೆ ಎಂದು ನಂಬಿದರು. ಸರ್ವತಂತ್ರ–ಸ್ವತಂತ್ರನಾದ ಭಗವಂತನ ಅನುಗ್ರಹದಲ್ಲಿ ವಿಶ್ವಾಸವಿಡಲೂ, ಸಂಸಾರದ ಬಗೆಗೆ ನಿರ್ಲಿಪ್ತತೆಯನ್ನು ಬೆಳೆಸಿಕೊಳ್ಳಲೂ ಸೂಚಿಸಿದರು. ಶ್ರೀಹರಿಯಲ್ಲಿ ದೃಢಭಕ್ತಿಯನ್ನು ಬೆಳೆಸಿಕೊಳ್ಳಲು ಹೇಳಿ "ಈಸಬೇಕು ಇದ್ದು ಜಯಿಸಬೇಕು" ಎಂಬ ಮಂತ್ರವನ್ನು ಸಾರಿದರು. ಸಂಸಾರದಿಂದ ಓಡಿಹೋಗಲು ಹೇಳಲಿಲ್ಲ. ಮಾನವನಲ್ಲಿಯ ಸಾತ್ವಿಕ ಗುಣವನ್ನು ಪ್ರಚೋದಿಸಿ ಉದ್ಧಾರದ ಮಾರ್ಗವನ್ನು ಹೇಳಿದರು. ಅಂತೆಯೇ ಅವರ ಕೃತಿಗಳಲ್ಲಿ ವೇದೋಪನಿಷತ್ತುಗಳ ಸಾರ ಮೂಡಿ ಬಂದಿದೆ. ಈ ತತ್ತ್ವಗಳ ವಿವರಣೆಗೆ ಪುರಾಣಿಕ ದೃಷ್ಟಾಂತಗಳು ಸಹಾಯಕವಾಗಿವೆ. ಇಲ್ಲಿ ಕಾವ್ಯ–ಸಂಗೀತಗಳ ಮಧುರ ಮಿಲನವಿದೆ. ಸಾಮಾನ್ಯರ ಬಳಕೆಯ ನುಡಿಯ ಬೆಡಗಿದೆ.

ಹರಿದಾಸ ಸಾಹಿತ್ಯಕ್ಕೆ ಸಾಮಾನ್ಯವಾಗಿ ಅನ್ವಯಿಸುವ ಈ ವಿಚಾರಗಳು ಪ್ರಸನ್ನವೆಂಕಟದಾಸರ ಕೃತಿಗಳಿಗೂ ಅನ್ವಯಿಸುತ್ತವೆ.

೧೭-ನೆಯ ಶತಮಾನದ ಕೊನೆಯ ಭಾಗದಲ್ಲಿ ಸುಮಾರು ೧೬೮೦ ಜನ್ಮ ತಾಳಿದ ಪ್ರಸನ್ನವೆಂಕಟದಾಸ ಬಾಗಿಲುಕೋಟೆಯ ನರಸಪ್ಪಯ್ಯ ಹಾಗೂ ಲಕ್ಷ್ಮೀಬಾಯಿಯವರ ಮಗ. ವೆಂಕಪ್ಪಯ್ಯನೆಂಬ ಹೆಸರಿನಿಂದ ಬೆಳೆದ ಈ ಮಗು ಬಾಲ್ಯದಲ್ಲಿಯೇ ತಾಯಿತಂದೆಗಳನ್ನು ಕಳೆದುಕೊಂಡಿತು. ಅಣ್ಣ ಹಾಗೂ ಅತ್ತಿಗೆಯ ಆಶ್ರಯದಲ್ಲಿ ಬೆಳೆಯುವಾಗ ವೆಂಕಟೇಶಮಹಾತ್ಮ್ಯವನ್ನು ನಿತ್ಯ ಕೇಳುತ್ತಿದ್ದ. ದನಕಾಯುತ್ತ ಬೆಳೆಯುವಾಗ ಅತ್ತಿಗೆಯ ಬಿರುನುಡಿಗೆ ನೊಂದು ತಿರುಪತಿಯ ವೆಂಕಟೇಶನನ್ನು ಕಾಣಲು ಹೊರಟ. ಬಾಗಿಲಕೋಟೆಯಿಂದ ತಿರುಪತಿಯವರೆಗಿನ ಪ್ರವಾಸದ ಕಟು ಅನುಭವವನ್ನು ವೆಂಕಟೇಶಸ್ತೋತ್ರದ ಪಠಣೆಯಲ್ಲಿ ಮರೆತು ಭಗವಂತನ ದರ್ಶನ ಪಡೆದ.

ತಿರುಪತಿಯಲ್ಲಿ ಕಂಡ ಹರಿದಾಸರ ಹಾಡು, ಭಜನೆ, ನೃತ್ಯಗಳು ಅವನನ್ನು ಪರವಶನನ್ನಾಗಿಸಿದುವು. ಅವುಗಳಿಂದುಂಟಾಗುವ ಆನಂದದಲ್ಲಿ ತಾನೂ, ತನ್ನನ್ನೇ ಪರಮಾತ್ಮನಿಗೆ ಅರ್ಪಿಸಿಕೊಳ್ಳಲು ಸಿದ್ಧನಾಗಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ, ಪರಿಶುದ್ಧ ಮನಸ್ಸನಾಗಿ, ಪ್ರಾಯೋಪವೇಶ ವ್ರತ ಧಾರಣಮಾಡಿ, ಶ್ರೀನಿವಾಸನ ಸಮ್ಮುಖದಲ್ಲಿ 'ಪ್ರಾಣಾಚಾರಿ'ಯಾಗಿ ಬಿದ್ದನಂತೆ.

ಪರಮಾತ್ಮ ಆತನನ್ನು ಮೆಚ್ಚಿಕೊಂಡು ಉದ್ಧರಿಸಲು ತನ್ನ ಕರಕಮಲದಿಂದ ಆತನ ನಾಲಿಗೆಯ ಮೇಲೆ 'ವೆಂಕಟೇಶ' ಎಂದು ಬರೆದನಂತೆ. ಈ ಪವಾಡದಿಂದ ದನಕಾಯುತ್ತಿದ್ದ ವೆಂಕಪ್ಪಯ್ಯ ಜ್ಞಾನಿಯಾಗಿ ಪ್ರಸನ್ನವೆಂಕಟದಾಸನಾದ. ಜನ್ಮಾಂತರದ ಸುಜ್ಞಾನವೂ ಪ್ರಾಪ್ತವಾಯಿತಂತೆ. ಎಚ್ಚರವಾದಾಗ ಮೂಡಿದ ಮೊದಲ ಮಾತುಗಳೇ 'ಕೀರ್ತನೆ'ಯಾದವು.

"ತಪ್ಪು ನೋಡದೆ ಬಂದೆಯಾ ನನ್ನ<br>
ತಂದೆಯೇ।<br>
ಅಪ್ಪ ತಿರುವೆಂಗಳೇಶನೆ ನಿರ್ದೋಷನೆ ॥ಪಲ್ಲ॥

**ಶ್ರೀ ಪ್ರಹ್ಲಾದ ಕುಮಾರಭಾಗೋಜಿ**

ಎಂಬುದೇ ಅವರ ಪ್ರಥಮ ಕೀರ್ತನೆ.

ತಮ್ಮ ಅನುಭಾವವನ್ನು ಹಾಡುಗಳಲ್ಲಿ ಮೂಡಿಸುವಾಗ ವಿದ್ಯಾಭ್ಯಾಸದ ಕೊರತೆ ಎನಿಸಿ ತಮ್ಮ ಊರಿನೆಡೆಗೆ ತಿರುಗಿ ಬಂದು ಮುದ್ಗಲ ಜನಾರ್ದನಾಚಾರ್ಯರಲ್ಲಿ ಅಭ್ಯಾಸಮಾಡಿದರು. ಈ ವಿದ್ಯಾಭ್ಯಾಸ ಬಲದಿಂದ ಅವರ ಪ್ರತಿಭೆ ಬೆಳಗಲು ಅವಕಾಶವಾಯಿತು. ಸಾಹಿತ್ಯಸೃಷ್ಟಿ ವಿಪುಲವಾಗಿ ನಡೆಯಲು ಸಾಧ್ಯವಾಯಿತು. ಕೀರ್ತನೆಗಳು, ಸುಳಾದಿಗಳು, ಉಗಾಭೋಗಗಳು, ಇತರ ಗ್ರಂಥಗಳು ಸೃಷ್ಟಿಯಾದವು. ಹರಿದಾಸರಿಗೆಲ್ಲ ಸಾಮಾನ್ಯವಾದ ಆಶುಕವಿತ್ವ ಇವರಲ್ಲಿಯೂ ಇತ್ತು. ಕ್ಷೇತ್ರಯಾತ್ರೆಗಳನ್ನು ಮಾಡುವಾಗ ಸಮಯಕ್ಕನುಗುಣವಾಗಿ ಮೂಡಿದ ಪದಗಳು ಭಾಷೆ, ಸಂಗೀತಗಳ ಮೆರಗನ್ನು ಪಡೆದು ನಿಂತುವು.

ಪ್ರಸನ್ನ ವೆಂಕಟದಾಸರು ಮಾಡಿದ ಪವಾಡಗಳನ್ನು ಹೇಳಲಾಗುತ್ತದೆ. ಅಡವಿಯಲ್ಲಿ ಹೋಗುವಾಗ ಹುಲಿಯ ಸೇವೆ ಪಡೆದು, ಅದರ ಹಣೆಯ ಮೇಲೆ ನಾಮ ಬರೆದು ಅದನ್ನು ಸಾಧುಪ್ರಾಣಿಯನ್ನಾಗಿಸಿದ್ದು, ಒಂದೇ ದಿವಸ ಎರಡು ರೂಪದಲ್ಲಿ ಇಬ್ಬರ ಮನೆಗಳಲ್ಲಿ ಪ್ರಸಾದ ಸ್ವೀಕರಿಸಿದುದು ಒಂದೆರಡು ಉದಾಹರಣೆಗಳು. ಮಹಾತ್ಮರ ಬಗೆಗೆ ಇಂಥ ಪವಾಡಗಳನ್ನು ಎಲ್ಲ ಕಡೆಗೂ ಕೇಳುತ್ತೇವೆ.

ಶಕೆ ೧೬೭೪ (ಕ್ರಿ.ಶ. ೧೭೫೨) ಅಂಗಿರಸ ಸಂವತ್ಸರ ಭಾದ್ರಪದ ಶುದ್ಧ ಏಕಾದಶಿಯ ದಿವಸ ಪ್ರಾಣೋತ್ಕ್ರಮಣವಾಗುವ ಮೊದಲು ಇವರಿಗೆ ಬಾಲಕೃಷ್ಣನ ರೂಪದಲ್ಲಿ ಪರಮಾತ್ಮನ ದರ್ಶನವಾಯಿತಂತೆ. ದಾಸರಿಂದ ರಚಿತವಾದ ಕೊನೆಯ ಪದವೇ ಇದನ್ನು ಸಾರುತ್ತದೆ.

ದಾರೋ ನೀ ಚಿನ್ನಾ ದಾರೋ ।
ಗಾರು ರಾತ್ರಿಯೊಳೆಮ್ಮಾಗಾರಕ್ಕೆ ಬಂದಿ ॥
॥ ಪಲ್ಲ ॥

ಇಕ್ಕಿದ ಕದಗಳಿಕ್ಕ್ಯಾವ್ಯೋ ನಿದ್ರೆ ।
ಉಕ್ಕೇರಿ ಕಣ್ಣು ಮುಚ್ಚ್ಯಾವ್ಯೊ ನಮ್ಮ ।
ತಕ್ಕೈಸುವಂತೆ ನೀ ಕಳ್ಳ ।
ಚಿಕ್ಕಮಕ್ಕಳಾಟವಿದಲ್ಲೊ ಚೆಲುವಾ ॥

............... . ..................

ಆಗ ಗೋಪಾಲನಂತಿದ್ದಿ ನೀ ।
ಬ್ಯಾಗ ಚಟುಲ ರೂಪನಾದಿ ।
ಈಗೆಮ್ಮನೆಲ್ಲಾರಂತ್ಸೆದಿ ಕೋಟಿ ಪೂಗಣಿರ ।
ಹೋಲುತ್ತೈದೆ ನೀ ಹದೆ ॥
ಸಪ್ಪಳಿಲ್ಲದೆ ಕೂಡು ಕಾಣೋ ಕೇಳಿ ।
ಒಪ್ಪರಿನ್ನಾರಾರು ಕಾಣೋ ।
ಕಪ್ಪವನ್ನಿತ್ತೆನ್ನ ಪ್ರಾಣ ಕಾಯೋ ।
ಶ್ರೀ ಪ್ರಸನ್ವೆಂಕಟಪರಮ ಪ್ರವೀಣಾ ॥

ಬಾಗಿಲುಕೋಟೆಯಲ್ಲಿ ಹುಟ್ಟಿದ ಈ ಜೀವ ಬಾದಾಮಿಯಲ್ಲಿ ಇಹಲೋಕಯಾತ್ರೆಯನ್ನು ಮುಗಿಸಿತು. ಈಗಲೂ "ಶ್ರೀ ಪ್ರಸನ್ನ ವೆಂಕಟರ ಕಟ್ಟೆ" ಇದೆ.

ಇಂಥ ಮಹಾನುಭಾವರ ಕೃತಿರಚನೆ ವೈವಿಧ್ಯಪೂರ್ಣವಾಗಿದೆ. ಅವರು ಬರೆದ ಕೀರ್ತನೆಗಳಲ್ಲಿ ತಾರತಮ್ಯವನ್ನು ಅನುಸರಿಸಿದ ದೇವಸ್ತುತಿಯೂ ಇದ್ದೇ ಇದೆ. ಭಗವಂತನ ನಾಮ ಮಹಿಮೆಯ ಜೊತೆಗೆ ನೀತಿಪದಗಳಿವೆ, ವೈರಾಗ್ಯಭಾವದ ಪದಗಳಿವೆ; ವ್ಯಾಕುಲಭಾವದ ಪದಗಳಿವೆ; ಮುಮುಕ್ಷು ಭಾವದ ಪದಗಳಿವೆ; ಶಾಂತಭಾವದ ಪದಗಳಿವೆ; ದಾಸ್ಯಭಾವ, ಸಖ್ಯಭಾವ, ವಾತ್ಸಲ್ಯಭಾವದ ಪದಗಳಿವೆ, ಸುಳಾದಿ, ಉಗಾಭೋಗಗಳೂ ಅವರಿಂದ ರಚಿತವಾಗಿವೆ.

ಕೀರ್ತನೆಗಳಲ್ಲದೆ ಇತರ ಕೃತಿಗಳೂ ಇವೆ. ಅವುಗಳಲ್ಲಿ ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ, ನಾರಾಯಣ ಪಂಜರ, ಭ್ರಮರಗೀತೆ, ಸಮಸ್ತನಾಮ ಮಣಿಗಳ ಷಟ್‌ಚರಣ ಪದ್ಯಮಾಲಾ, ಸತ್ಯಭಾಮಾ ವಿಲಾಸ, ಭಾಗವತ ದಶಮಸ್ಕಂಧ ಪೂರ್ವಾರ್ಧ ಇವೇ ಪ್ರಧಾನ ಗ್ರಂಥಗಳು.

ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆಯಲ್ಲಿ ನಾರದ ಮಹರ್ಷಿಗಳು ಕೊರವಂಜಿ ವೇಷ ಧರಿಸಿ ರುಕ್ಮಿಣಿಯನ್ನು ಕಂಡು ಕೃಷ್ಣನನ್ನು ವರಿಸಲು ಹೇಳುವ ಕಥಾವಸ್ತುವಿದೆ. ೩೪ ಪದಗಳಲ್ಲಿ ಬೆಳೆದುನಿಂತ ಈ ಕೃತಿಯಲ್ಲಿ ೯೫ ನುಡಿಗಳಿವೆ. ಎಲ್ಲವೂ ರಾಗ–ತಾಳಬದ್ಧವಾದುವು. ವಿಷ್ಣುಸ್ತೋತ್ರದ ನಂತರ ಭೂದೇವಿಯು ನಾರದನನ್ನು ಭೆಟ್ಟಿಯಾದ ಸಂದರ್ಭದ ವರ್ಣನೆ. ಆಮೇಲೆ ಕೊರವಂಜಿಯ ವರ್ಣನೆ. ಕೆಳದಿಯರ ಗಡಣದಿ ಒಪ್ಪುವ ಚಲುವೆಯ ವರ್ಣನೆ:

ಮಂಜುಗಾವಿಯ ಸೀರಿ ನಿರಿತೆಗೆದುಟ್ಟು ।
ಕೆಂಜಡೆ ಬಿಟ್ಟೋರೆ ದುರುಬೀನ ಕಟ್ಟು ॥
ಪಂಜಿನೋಲೆಯ ಮೂಗುತಿ ಬಾಲೆಇಟ್ಟು
ಗುಲ–
ಗಂಜಿ ಹೊಂಗಾಳೆ ಸರಗಳ ಅಳವಟ್ಟೊ ॥
ಚಂಚಲನೇತ್ರ ಕಂಜನ ಬಾವುಲಿಟ್ಟೊ
ಮಿಂಚುವ ಆಭರಣಗಳನು ತೊಟ್ಟು ॥

ಬರುವ ಕೊರವಂಜಿಯನ್ನು ಕಂಡು ಜನರು ಮೋಹಿನಿಯನ್ನು ಕಂಡು ನಾಗರಿಕರು–ನೋಟಕರು, ಪಾಠಕರು "ಲಿಪಿಯ ಚಿತ್ರದೋಲು ನಿಂತರು". ಅಂತೆ ರಾಗ – ತಾಳಬದ್ಧವಾಗಿ ಹಾಡಿಯೇ, ಹಾಡು ಕೇಳಿಯೇ ಈ ಕಾವ್ಯದ ಸವಿಯನ್ನು ಅನುಭವಿಸಬೇಕು.

ನಾರಾಯಣಪಂಜರವು ೪೦ ಪದ್ಯಗಳಲ್ಲಿ ನಾರಾಯಣನ ಸ್ತೋತ್ರ. ಒಂದು ಸಾಲಿನಲ್ಲಿ, ಪುರಾಣಕಥೆಯ ಸಂದರ್ಭ ತಿಳಿಸಿ, ಮರುಸಾಲಿನಲ್ಲಿ 'ನಾರಾಯಣಾ ನಮೋ ನಾರಾಯಣ' ಎಂದು ಉಚ್ಚಾರ. ಹೀಗೆ ಸಾಗುವ ಈ ಕೃತಿಯಲ್ಲಿ ನಾರಾಯಣನ ನಾಮಸ್ಮರಣೆಗೆ ನಾಲಗೆ ಮೀಸಲಾಗಿದೆ. ಭಾವತುಂಬಿ ನಾದಮಯವಾಗಿ ಇದನ್ನು ಹೇಳುವವನೂ ಭಕ್ತಿಪರವಶನಾಗುತ್ತಾನೆ.

ಭ್ರಮರಗೀತೆಯನ್ನು ಶ್ರೀಪಾದರಾಯರೂ ಬರೆದಂತೆ ತಿಳಿಯುತ್ತದೆ. ಆದರೆ ಕನ್ನಡದ ಈ ಭ್ರಮರಗೀತೆಯನ್ನು ಶ್ರೀ ಪ್ರಸನ್ನವೆಂಕಟದಾಸರೇ ಬರೆದಿರಬೇಕೆನ್ನಲು ಇಲ್ಲಿಯ ಭಾಷಾಶೈಲಿ ಹಾಗೂ ಪ್ರಸನ್ನವೆಂಕಟರು ಭಾಗವತ ದಶಮಸ್ಕಂಧದ ಪೂರ್ವಾರ್ಧವನ್ನು ರಚಿಸಿರುವುದು ಸಹಾಯಕವಾಗಿವೆ. ಇದರ ವಸ್ತುವೂ ಭಾಗವತದ ದಶಮಸ್ಕಂಧದಲ್ಲಿ ವ್ಯಕ್ತವಾದುದು.

ಭಾಮಿನೀ ಷಟ್ಪದಿಯಲ್ಲಿ ರಚಿತವಾದ ಕೃತಿ "ಸಮಸ್ತನ್ಯಾಯ ಮಣಿಗಣ ಷಟ್‌ಚರಣ ಪದ್ಯಮಾಲಾ". ೭೧ ನುಡಿಗಳ ಈ ಕೃತಿಯಲ್ಲಿ ಶ್ರೀ ವಿಷ್ಣುವಿನ ನಾಮಸ್ಮರಣೆ ಇದೆ. ವಿಷ್ಣುಸಹಸ್ರನಾಮಾವಳಿಯಂತೆ ಇರುವ ಕೃತಿ, ವರ್ಣಮಾಲೆ,

ಗುಣಿತಾಕ್ಷರಗಳನ್ನು ಕಾವ್ಯದ ಉದ್ದಕ್ಕೂ ಕ್ರಮವಾಗಿ ಬಳಸಿ ಚಾತುರ್ಯ ತೋರಿದ ಕೃತಿ. ಲ, ಳ ಬಳ್ಳಿಯೊಂದು ಇಲ್ಲಿ ಕಾಣದು. ಒಂದರಿಂದ ಹತ್ತೊಂಬತ್ತರವರೆಗಿನ ಅಂಕಿಗಳು, ಪಂಚಮಹಾಭೂತಗಳು, ಹನ್ನೆರಡು ರಾಶಿ, ಇಪ್ಪತ್ತೇಳು ನಕ್ಷತ್ರಗಳು ದಶಾವತಾರಗಳನ್ನೆಲ್ಲ ಇಲ್ಲಿ ಹೆಸರಿಸಿ ಪರಮಾತ್ಮನ ಸ್ತುತಿ ಮಾಡಲಾಗಿದೆ. ಪ್ರಸನ್ನವೆಂಕಟದಾಸರ ಪಾಂಡಿತ್ಯವನ್ನು ಇಲ್ಲಿ ಕಾಣಬಹುದಾಗಿದೆ. ಆದರೆ ಪಾಂಡಿತ್ಯಪ್ರದರ್ಶನ ಅವರ ಉದ್ದೇಶವಲ್ಲ. ಪುರಾಣಗಳ ಘಟನೆಗಳು, ಸಂಸ್ಕೃತ–ಕನ್ನಡ ಭಾಷೆಗಳು ಕರಗತವಾದ ಮಹಿಮಾನ್ವಿತ ದಾಸರಿಂದ ಸಹಜವಾಗಿ ಮೂಡಿಬಂದ ಸಾಹಿತ್ಯವಿದು.

ಸತ್ಯಭಾಮಾವಿಲಾಸವು ಶ್ರೀಕೃಷ್ಣ ಪಾರಿಜಾತದ ಕಥೆ. ಈ ಸಂಗತಿಗಳಲ್ಲಿ ಬೆಳೆದ ಈ ಕೃತಿಯಲ್ಲಿ ರುಕ್ಮಿಣಿ – ಸತ್ಯಭಾಮೆಯರ ಬಗೆಗಿನ ಕೃಷ್ಣನ ಪ್ರೀತಿ, ಸ್ತ್ರೀಸಹಜ ದೂಷಣೆ, ಸವತಿ ಮತ್ಸರಗಳ ಚಿತ್ರಣವನ್ನು ಕಾಣುತ್ತೇವೆ. ಜೊತೆಗೆ ಕೃಷ್ಣ ಭಕ್ತವತ್ಸಲನೆಂಬುದನ್ನು ತಿಳಿಯುತ್ತೇವೆ.

ಭಾಗವತ ದಶಮಸ್ಕಂಧದ ಪೂರ್ವಾರ್ಧವು ಪ್ರಸನ್ನವೆಂಕಟದಾಸರಿಗೆ ಕೃಷ್ಣನ ಲೀಲೆಗಳನ್ನು ವರ್ಣಿಸಲು ಸಾಧನ ಮಾತ್ರ. ಹೀಗಾಗಿ ಸೃಷ್ಟಿಯ ಉತ್ಪತ್ತಿ ಮೊದಲಾದ ಭಾಗವತದಲ್ಲಿಯ ವಿಷಯವನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಕಥೆಯಲ್ಲಿ ಅಲ್ಲಲ್ಲಿ ಮಾರ್ಪಾಟು ಮಾಡಿಕೊಂಡಿದ್ದಾರೆ. ಅಲ್ಲಲ್ಲಿ ಸಂಗ್ರಹಮಾಡಿದ್ದಾರೆ. ಮೂಲದಲ್ಲಿಲ್ಲದ ಗೋವುಗಳನ್ನು ಕರೆವ ವಿಧಾನ ಪರಿಣಾಮಕಾರಿಯಾಗಿದೆ.

ಉಳಿದ ದಾಸರಲ್ಲಿ ಕಾಣದ (ಕನಕದಾಸರನ್ನುಳಿದು) ಈ ಸಾಹಿತ್ಯ ರಚನೆಯಿಂದ ಪ್ರಸನ್ನವೆಂಕಟದಾಸರು ವೈಶಿಷ್ಟ್ಯಪೂರ್ಣರಾಗಿ ತೋರುತ್ತಾರೆ.

ಇವರ ಕೀರ್ತನೆ, ಸುಳಾದಿ, ಉಗಾಭೋಗಗಳಲ್ಲಿ ಹರಿದಾಸರ ಪರಂಪರೆಯನ್ನೇ ಕಾಣುತ್ತೇವೆ. ಪ್ರಸನ್ನ ವೆಂಕಟದಾಸರ ಕೀರ್ತನೆಗಳ ಹಿರಿಮೆಯನ್ನು ಕಾಣಲು ಅವರ ಕೃತಿಗಳನ್ನೇ ಓದಬೇಕು; ಹಾಡಿದರೆ ಇನ್ನೂ ಉತ್ತಮ.

ಆರ ಬಾಲಕನೇ ? ಜಾರನಿವ ।
ನಾರ ಬಾಲಕನೇ ॥ ಪಲ್ಲ ॥

ಗುಂಡಿಗೆ ಜಿಣ್ಣೆ ಕದ್ದುಂಡು ಸ್ತ್ರೀಯರ ಕುಚ
ಪುಂಡರೀಕವಿಡಿದು ಭಂಡು ಮಾಡುತಲಿಹನೇ
ನಿದ್ರೆಯ ಕಾಲಕೆ ಸದ್ದಿಲ್ಲದೆ ಬಂದು ।
ಗದ್ದ ಮುದ್ದಡಸಿ ಮುದ್ದು ನೀಡುವನಿವನೆ ॥
ಅರ್ಥಾಲಿ ಬಾಲನೆಂದೆತ್ತಿಕೊಂಡರೇನಮ್ಮಾ
ಅತ್ತೆ ಮಾವನ ಮುಂದೆ ಬತ್ತಲೆ ಮಾಡ್ವನಿವ ॥
ಬಲು ಮೋಹ ಬರುತಿದೆ ಎಳೆಯನ ಕಾಣುತ
ಹಳತಾದೆ ಮುಡಿಯೊಳು ಕಳೆದ ಕಂಚುಕವನಿವ

—ಎಂದು ಶೃಂಗಾರ, ವಾತ್ಸಲ್ಯಗಳನ್ನು ಬೆರೆಸಿದರು.

ಅಮ್ಮಾ ಬಾರೋ ರಂಗಮ್ಮ ಬಾರೋ ಪುಟ್ಟ!
ತಿಮ್ಮಾ ಬಾರೋ ಮುದ್ದುಮ್ಮ ಬಾರೋ
॥ ಪಲ್ಲ ॥

ಅಯ್ಯಾ ಬಾರೋ ಅಜ । ಜಿಯ್ಯಾ
ಬಾರೋ ಜೀಯ ॥
ಮಯ್ಯಾ ಬಾರೋ ಜಾಣ । ಗೆಯ್ಯಾ
ಬಾರೋ ।
ಕಂದ ಬಾರೋ ಪೂರ್ಣ । ನಂದ ಬಾರೋ,
ನಾದ ॥
ಚಂದ್ರಾ ಬಾರೋ ಬಾಲ್ಯ । ಕುಂದಾ
ಬಾರೋ ॥
ಅಣ್ಣಾ ಬಾರೋ ತಾವರೆ । ಗಣ್ಣಾ ಬಾರೋ
ಎನ್ನ
ಚಿನ್ನಾ ಬಾರೋ ಶಿಶು । ರನ್ನ ಬಾರೋ ॥
ನಲಿಯು ಬಾರೋ ಕರುಣಾ । ಜಲಧಿ ಬಾರೋ
ಆಡಿ ॥
ಬಳೆದ ಬಾರೋ ಕರೆದ । ರೊಲಿದು ಬಾರೋ ॥
ಶ್ರೀಶಾ ಬಾರೋ ಹಸು । ಗೂಸೆ ಬಾರೋ
ಹರಿ ॥
ತೋಷಾ ಬಾರೋ ಪ್ರಸನ್ವೆಂಕ । ಟೇಶಾ
ಬಾರೋ ॥

ಇಲ್ಲಿ ಶುದ್ಧ ವಾತ್ಸಲ್ಯ ಭಾವ ಇದೆ. ಬಾಲಭಾಷೆಯಲ್ಲಿಯೇ ಬರೆದ 'ಎಶೋದೆಯಮ್ಮಾ' ಅದ್ಭುತ ಕೀರ್ತನೆಯಾಗಿದೆ, ಕೃಷ್ಣನೇ ಯಶೋದೆಗೆ ಹೇಳುತ್ತಾನೆ:

ಎಶೋದೆಯಮ್ಮಾ ।
ನಂಗನ್ನೆತ್ತಿಕೋ ಅಮ್ಮಾ ಬಾಲು ।
ವತ್ತು ಅತ್ತು ಬಂದೀನೆ ।
ಇತ್ತೆ ಅಮ್ಮಿ ತಿಂದೇನೆ ॥ ॥ ಪ ॥

ತುತಿಬಾಯಿ ವಂಗ್ಯಾವೆ ।
ಬಿತಿ ಅವು ವಾತಕ್ತಿ ಬಕ್ತಾವೆ ।
ಅತಿ ಅವು ಉಪ್ಪುಕಾಯಿ ಅಮ್ಮ ಮನೆಮ್ಕಲ್ಲೆ ।
ಉತ್ತತ್ತಿ ಬೆನ್ನಿ ತಿಂದೇನೆ ॥

ಈ ಭಾಷೆ, ಈ ಮುದ್ದುಮಾತು ಯಾರಿಗೂ ಸಂತಸವನ್ನುಂಟುಮಾಡುತ್ತದೆ.

ಮಹತಿಗೆ ಮಹತು ಶ್ರೀಹರಿಯ ನಾಮಾ
॥ ಪಲ್ಲ ॥

ಹಿಂದೊದಗಿದಘರಾಶಿ ಬೇಯ್ಸಿ ಬಿಸುಡುವ
ನಾಮ
ಮುಂದೆ ಬಹ ದುರಿತಕಡ್ಡಾದ ನಾಮ
ಮುಂದಮತಿ ಕತ್ತಲೆಗೆ ಬಾಲಾರ್ಕಸಮ ನಾಮ
ದಂದುಗದ ಬಳ್ಳಿಯನು ಹರಿವ ನಾಮ ॥

ಈ ಕೀರ್ತನೆಯಲ್ಲಿ ಹರಿನಾಮ ಮಹಿಮೆ ಇದೆ.

ಹರಿ ನಿನ್ನಡಿಯ ಕಲ್ಲಾದೇ ರಘುನಾಥ ॥
ಹರಿ ನಿನ್ನಡಿಗಲ್ಲವಾದೇ ಮಹನಾ ॥

ಇದರಲ್ಲಿ ಹರಿಯ ಅನುಗ್ರಹದ ಮಹತ್ವವನ್ನು ತಿಳಿಸಲಾಗಿದೆ. "ಹರಿಯಲ್ಲಿದನ್ನು ಭಕ್ತಿಗಳು ಕೈವಲ್ಯಸಾಧನವೇ ॥" ಎಂದು ಹರಿಯಿಂದಲೇ ಮೋಕ್ಷವೆಂದು ಹೇಳುತ್ತಾರೆ, "ವಾಸುದೇವನ ಹಿಂಗಿರುಗಿ ಅಘವು ಹೊಂದಬಲ್ಲುದೇನ್ನೈ".

ಅವರ ಮೋಕ್ಷಸಾಧನೆಗೆ ಗುರುವಿನ ಅಗತ್ಯವೂ ಇದೆ. ಎಂತಲೇ ದಾಸರು "ಗುರುಪಾದ ಪದ್ಮದಿ ಬಲಿದ ವಿಶ್ವಾಸಾ। ಗುರುಕೃಪೆ ಇಲ್ಲದ ಪುಣ್ಯ ನಿಷ್ಫಲಾ ॥" ಎನ್ನುತ್ತಾರೆ. ಜೊತೆಗೆ ಸಜ್ಜನ ಸಂಗ, ವ್ರತಪಾಲನೆ, ಸದಾಚಾರಗಳನ್ನು ಕುರಿತು ಉಪದೇಶ ಮಾಡುವ ಕೀರ್ತನೆಗಳೂ ಇವೆ.

ಹದಿನೇಳು ಹದಿನೆಂಟನೆಯ ಶತಮಾನಗಳಲ್ಲಿ ದಾಸಸಾಹಿತ್ಯ ಬೆಳಗಿಸಿದವರಲ್ಲಿ ಪ್ರಸನ್ನವೆಂಕಟದಾಸರೂ ಗಣ್ಯರು. ಧರ್ಮ–ನೀತಿಗಳು ಅಳಿದು ಸಮಾಜ ಅಸ್ತವ್ಯಸ್ತವಾಗುವುದನ್ನು ತಡೆದ ಮಹಾಸಾಧನೆ ಈ ಸಾಹಿತ್ಯದ್ದು. ನೀತಿಯ ಆವರಣದಲ್ಲಿ ಉಳಿದುಕೊಂಡೂ ಸರ್ವಹಿತ ಸಾಧನೆ ಮಾಡಿದ ಮಹತಿ ಈ ಸಾಹಿತ್ಯಕ್ಕೆ. ದ್ವೈತಸಿದ್ಧಾಂತವನ್ನು ವಿವರಿಸುವಾಗ ಅವರು ತೋರಿದ ಘನತೆಯೂ ದೊಡ್ಡದು.

"ಜೀವನದ ಅನೇಕ ಎಡರು–ತೊಡರುಗಳನ್ನು ಸಹಿಸಿಕೊಂಡು, ವಿಶ್ರಾಂತಿ – ಉಲ್ಲಾಸಗಳನ್ನು ಬದಿಗೊತ್ತಿ, ಸತ್ಯ ನಿಷ್ಠೆ–ಶೀಲ ಮತ್ತು ದೈವ ಭಕ್ತಿಯ ಮಾರ್ಗದಲ್ಲಿ ನಡೆಯಿರೆಂದು, ಸುಶ್ರಾವ್ಯವಾದ ಸ್ಫೂರ್ತಿದಾಯಕವಾದ ಸಂಕೀರ್ತನೆಯ ಮೂಲಕ ಜನರಿಗೆ ಕರೆ ನೀಡುತ್ತ, ತಂಬೂರಿಯ ಶ್ರುತಿಸಮೇತ ಹಾಡುತ್ತ, ಬರಿಗಾಲಿನಲ್ಲಿ ಮನೆಯಿಂದ ಮನೆಗೆ, ಊರಿಂದ ಊರಿಗೆ, ಸಂಚಾರ ಮಾಡುತ್ತಲಿದ್ದ ಹರಿದಾಸರ ಚಿತ್ರ ಬಹುಶಃ ಮಾನವ ಚಕ್ಷುವಿಗೆ ಬೆಳಗಬಹುದಾದ ಅತ್ಯಂತ ಸ್ಫೂರ್ತಿದಾಯಕವಾದ ದೃಶ್ಯವೆಂದು ಪರಿಗಣಿಸಬಹುದಾಗಿದೆ. ಉದಾತ್ತಭಾವನೆಗಳಿಗೆ ಮನಸೋಲುವ ಯಾವ ಹೃದಯವೂ ಬೇಡವೆಂದು ಹೇಳಲಾರದಂತಹುದು; ಹರಿದಾಸರ ಸಭ್ಯ–ಸಾತ್ವಿಕ ಸಂದೇಶ ಹೃದಯದ ಮೇಲೆ ನೇರವಾಗಿ ಪ್ರಭಾವ ಬೀರುವಂತಹದೂ ಆಗಿದೆ"– ಎಂಬ ವಿಮರ್ಶಕರ ಮಾತು ಶ್ರೀ ಪ್ರಸನ್ನ ವೆಂಕಟದಾಸರಿಗೆ ಪರಿಪೂರ್ಣವಾಗಿ ಅನ್ವಯಿಸುತ್ತದೆ.

ನಮ್ಮ ದೇವಸ್ಥಾನಗಳು

# ಕಪಿಲೇಶ್ವರಸ್ವಾಮಿ ದೇವಾಲಯ

ತಿರುಪತಿಯ ಬಳಿಯಲ್ಲಿ ಎರಡು ಶಿವ ದೇವಾಲಯಗಳಿವೆ. ಒಂದು ತಿರುಚಾನೂರಿನ ಬಳಿಯ ಜೋಗಿ ಮಲ್ಲಾವರಂನ ಪರಾಶರೇಶ್ವರಸ್ವಾಮಿ ದೇವಾಲಯ ಹಾಗೂ ಇನ್ನೊಂದು ಕಪಿಲತೀರ್ಥದ ಬಳಿಯ ಕಪಿಲೇಶ್ವರಸ್ವಾಮಿ ದೇವಾಲಯ. (ಆಳ್ವಾರ್ ತೀರ್ಥ) ಶಾಸನಾಧಾರದಂತೆ ಕಪಿಲೇಶ್ವರಸ್ವಾಮಿ ದೇವಾಲಯವನ್ನು ಕಟ್ಟಿಸಿದಾತ ಬ್ರಹ್ಮರಾಯ ಅಥವಾ ರಾಯ ರಾಜೇಂದ್ರ ಚೋಳ. (ತಿ.ತಿ.ದೇ ಶಾಸನಗಳು ಸಂ – 1–20) ಈ ಶಾಸನವು ದೇವಾಲಯದ ಮುಖ ಮಂಟಪದ ದಾಲಮಂದ್ರದಲ್ಲಿ ಸೇರಿಸಿದಂತಿದೆ. ಇಲ್ಲಿನ ಬಿರುದಿನಂತೆ ಈತ ರಾಜೇಂದ್ರ ಚೋಳ 1 ನ (1012–1044) ಒಬ್ಬ ಅಧಿಕಾರಿಯಾಗಿದ್ದಿರಬೇಕು. ನಂತರದ ಕ್ರಿ.ಶ. 1531 ರ ಶಾಸನವು ತಿರುವೆಂಗಡ ಮುಡಿಯಾನ್‌ನ (ಶ್ರೀ ವೆಂಕಟೇಶ್ವರಸ್ವಾಮಿಯ) ಪವಿತ್ರಚಕ್ರತೀರ್ಥದಲ್ಲಿ ವಿಜಯನಗರದರಸನಾದ ಅಚ್ಯುತರಾಯನ್ನು ಕಪ್ಪುಕಲ್ಲಿನ ಮೆಟ್ಟಿಲುಗಳನ್ನು ನಿರ್ಮಿಸಿ, ಈ ಕೊಳದ ಮೂರು ಕಡೆಗಳಲ್ಲಿಯೂ ಸಂಧ್ಯಾವಂದನ ಮಂಟಪಗಳನ್ನು ನಿರ್ಮಿಸಿದನೆಂದು ತಿಳಿಸುತ್ತದೆ. (VI-8) ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ತಾಳ್ಳಪಾಕಂ ಪೆರಿಯ ತಿರುಮಲೈ ಅಯ್ಯಂಗಾರ್ಯನು ಅಧ್ಯಯನೋತ್ಸವ ಕಾಲದಲ್ಲಿ ಆಳ್ವಾರ್ ತೀರ್ಥದಲ್ಲಿನ ನಮ್ಮಾಳ್ವಾರರಿಗೆ ಶಾತ್ತುಮುರೈಯನ್ನು ನಡೆಸಲು ದತ್ತಿಯನ್ನು ನೀಡಿದನೆಂದು ಮುಂದಿನ ಶಾಸನವು (V–34) ತಿಳಿಸುತ್ತದೆ. ನಾಲ್ಕನೆಯ ಶಾಸನವು ಸದಾಶಿವರಾಯನ ಆಳ್ವಿಕೆಯಲ್ಲಿಯ ಕಾಲದ್ದಾಗಿ ಕ್ರಿ.ಶ. 1533ರಲ್ಲಿ ಕಪಿಲೇಶ್ವರಸ್ವಾಮಿ ದೇವಾಲಯದ ಪ್ರಾಕಾರ, ಅಡಿಗೆಯ ಸಾಲುಗಳು ಸಿಡಿಲಿನಿಂದ ಜೀರ್ಣವಾಗಿದ್ದು, ರಾಜವೀಟ್ಟು ನಯಾಕರ್ ಎಂಬುವವನು ಅದರ ದುರಸ್ತಿ ನಡೆಸಿದನೆಂದೂ ದಾಖಲಿಗೊಳಿಸಿದೆ. ಜೊತೆಗೇ ಸೇವಾಸಾನಿ ಎಂಬ ನೃತ್ಯಗಾತಿಯು ದೇವಾಲಯದ ನೃತ್ಯ ಮಂಟಪದಲ್ಲಿ ನೃತ್ಯ ಗಣಪತಿಯನ್ನು ಪ್ರತಿಷ್ಠಾಪಿಸಿದಳೆಂದೂ ಈ ಶಾಸನ ತಿಳಿಸುತ್ತದೆ. ಕ್ರಿ.ಶ. 1665 ರ ಒಂದು ಶಾಸನವು ಕಪಿಲತೀರ್ಥದ ಮೆಟ್ಟಿಲುಗಳು ಹಾಗೂ ಮಂಟಪಗಳನ್ನು ಮಹಂತ ಧರ್ಮದಾಸನು ದುರಸ್ತಿ ಮಾಡಿಸಿದನೆಂದು ತಿಳಿಸುತ್ತದೆ.



ನರಸಿಂಹಸ್ವಾಮಿ

ಕಪಿಲತೀರ್ಥದ ಜಲಪಾತದಿಂದ ಉಂಟಾದ ಕೊಳವು ನಮ್ಮಾಳ್ವಾರ್ ಹಾಗೂ ಗೋವಿಂದರಾಜಸ್ವಾಮಿ ದೇವಾಲಯಗಳ ಪೂಜಾ ಕಾರ್ಯಕ್ಕೆ ಅಗತ್ಯವಾದ ನೀರನ್ನು ಒದಗಿಸುತ್ತಿದ್ದಿತು. ಶಾಸನ ತಿಳಿಸುವಂತೆ ಗೋವಿಂದರಾಜಸ್ವಾಮಿಯ ಉತ್ಸವ ವಿಗ್ರಹವನ್ನು ಸುದರ್ಶನದೊಡನೆ (ಚಕ್ರತ್ತಾಳ್ವಾರ್) ತೀರ್ಥವಾರಿಗಾಗಿ ನಿಶ್ಚಿತ ದಿನಗಳಲ್ಲಿ ಮೆರವಣಿಗೆಯಲ್ಲಿ ಒಯ್ಯುತ್ತಿದ್ದರು. ಪ್ರಾಯಶಃ ಶಿವ ದೇವಾಲಯ ಹಾಗೂ ವೈಷ್ಣವ ದೇವಾಲಯಗಳ ಅಧಿಕಾರಿಗಳು ಕೊಳದ ಬಗೆಗಿನ ಹಕ್ಕುಗಳಿಗೆ ಸಂಬಂಧಿಸಿದಂತೆ ವಿವಾದಗಳಿಗೊಳಗಾಗಿರಬಹುದು. ಈಗಾಗಲೇ ತಿಳಿಸಿರುವಂತೆ ಕನ್ನಡ, ತೆಲುಗು ತಮಿಳು ಭಾಷೆಗಳಲ್ಲಿರುವ 1531ರ ಸ್ಥಳೀಯ ಶಾಸನಗಳಂತೆ ಕೊಳದ ಮೆಟ್ಟಿಲುಗಳು ಮೂರು ಕಡೆಯ ಸಂಧ್ಯಾವಂದನ ಮಂಟಪಗಳು ಹಾಗೂ ಕೊಳದ ನಾಲ್ಕು ಮೂಲೆಗಳಲ್ಲಿನ ಸುದರ್ಶನ ಚಕ್ರದ ಶಿಲಾ ಫಲಕಗಳು ಅಚ್ಯುತರಾಯನಿಂದ (1530–1542) ನಿರ್ಮಿತವಾದವು. ಪ್ರಾಯಶಃ ಈ ಶಿಲಾ ಫಲಕಗಳ ಸ್ಥಾಪನೆಯು ಕೊಳವು ವೈಷ್ಣವವೆಂಬುದರ ಅರ್ಥದಲ್ಲಿಯೇ ಇರಬಹುದು. ಕೊಳದ ನೈರುತ್ಯದ ದಡದಲ್ಲಿ ಲಕ್ಷ್ಮೀ ನಾರಾಯಣ ಪೆರುಮಾಳ್ ವಿಗ್ರಹ ಸ್ಥಾಪಿಸಲ್ಪಟ್ಟಿ ಸದಾಶಿವರಾಯನ ಕಾಲದಲ್ಲಿ, 1548 ರಲ್ಲಿ ಪೆರಿಯ ತಿರುಮಲೈ ಅಯ್ಯಂಗಾರ್ಯನಿಂದ ಒಂದು ಗುಡಿಯೂ ನಿರ್ಮಿತವಾಯಿತು. ಈಗ ಕಪಿಲೇಶ್ವರಸ್ವಾಮಿಯ ಗುಡಿಯ ಎದುರಿಗೆ ಕೊಳದ ಆಚೆ ಇರುವ ಗುಹೆಯಲ್ಲಿನ ಲಕ್ಷ್ಮೀ ನರಸಿಂಹನ ವಿಗ್ರಹವೂ ಪ್ರಾಯಶಃ ಈ ಕಾಲದಲ್ಲಿಯೇ ಸ್ಥಾಪಿತವಾಗಿರಬೇಕು.

ದೇವಾಲಯದ ಮುಂಭಾಗದಲ್ಲಿ ಕಂಭಗಳಿಂದ ಕೂಡಿದ ವಿಶಾಲವಾದ ಅಂಗಳವಿದೆ. ಅದರ ಆಚೆಗೆ ಮುಖ ಮಂಟಪದ ಇದೆ. ಅರ್ಧ ವೃತ್ತಾಕಾರದ ಪ್ರದಕ್ಷಿಣ ಪಥವು ಅಂತರಾಳ ಹಾಗೂ ಗರ್ಭಗೃಹಗಳನ್ನು ಸುತ್ತುವರಿದಿವೆ. ಕಪಿಲೇಶ್ವರಸ್ವಾಮಿಯ ದಕ್ಷಿಣಕ್ಕೆ ಅಂತರಾಳವಿದ್ದು, ಇನ್ನೂ ದಕ್ಷಿಣಕ್ಕೆ ಪ್ರದಕ್ಷಣಪಥ ಕೊನೆಗೊಳ್ಳುವಂತೆ ಚಚ್ಚೌಕವಾದ ಅಂಗಳವಿದೆ.

ಮುಂಭಾಗದ ಅಂಗಳದ ನಾಲ್ಕು ಕಂಬಗಳು ವಿಜಯನಗರದ ಶೈಲಿಯಲ್ಲಿವೆ. ಹಿಂಬದಿಯ ಗೋಡೆಯಲ್ಲಿ ದ್ವಾರಪಾಲಕರಿಂದ ಕೂಡಿದ ಒಂದು ಪ್ರವೇಶದ್ವಾರವಿದೆ. ಈ ಅಂಗಳದ ದಕ್ಷಿಣದಲ್ಲಿನ ಸಣ್ಣ ಗುಡಿಯಲ್ಲಿ ಗೋಡೆಯಲ್ಲಿ ಸೇರಿದಂತೆ ಕುಮಾರಸ್ವಾಮಿಯ ಕಲ್ಲಿನ ಮೂರ್ತಿಯಿದೆ.

ಮುಖ ಮಂಟಪವು ಆಯತಾಕಾರವಾಗಿದ್ದು ಮೂರು ಕಂಬಗಳ ಮೂರು ಸಾಲಿನ ಆಧಾರದಲ್ಲಿದೆ, ಈ ಕಂಭಗಳು ವಿಜಯನಗರ

ಶೈಲಿಯವು. ಅಂತರಾಳಕ್ಕೆ ಮುಖ ಮಾಡಿರುವ ಚಿಕ್ಕ ನಂದಿ ವಿಗ್ರಹವೂ ಇವೆ.

ಅಂತರಾಳ ಕಿರಿದಾಗಿದ್ದು ಇಕ್ಕಟ್ಟಿನದಾಗಿದೆ. ಗರ್ಭಗೃಹವು ಸುಮಾರು 6' ಎತ್ತರವಿದ್ದು ಚೋಳರ ಶೈಲಿಯ ಲಂಬ ಚತುರಸ್ರದ ಕಂಬಗಳಿಂದ ಕೂಡಿದೆ. ಅಂತರಾಳದ ಕಂಬಗಳೂ ಗೋಡೆಗಂಬಗಳೇ ಆಗಿವೆ. ಮೇಲಿನ ಕಪೋತಗಳು ತ್ರಿಕೋಣಗಳಿಂದ ಅಲಂಕೃತವಾಗಿವೆ. ಗರ್ಭಗೃಹದ ಮೇಲಣ ವಿಮಾನವು ಅಪೂರ್ಣವಾಗಿದ್ದು ಬೆಟ್ಟದ ಶಿಲೆಯಲ್ಲಿ ಸೇರಿ ಹೋಗಿದೆ. ಗರ್ಭಗೃಹದಲ್ಲಿ ವೇದಿಯ ಮೇಲೆ ಕಪಿಲೇಶ್ವರ ಲಿಂಗವಿದೆ.

ಕಾಮಾಕ್ಷೀ ದೇವಿಯ ಗುಡಿಯು ಇಕ್ಕಟ್ಟಾದ ಅಂತರಾಳ ಹಾಗೂ ಗರ್ಭಗೃಹದಿಂದ ಕೂಡಿದ್ದು, ಕಪಿಲೇಶ್ವರ ಹಾಗೂ ಕಾಮಾಕ್ಷೀ ಗುಡಿಗಳ ಸುತ್ತ ಒಂದು ಪ್ರದಕ್ಷಿಣ ಪಥವಿದೆ.

ಮೇಲೆ ಹೇಳಿದಂತೆ ಈ ಗುಡಿಗಳ ದಕ್ಷಿಣಕ್ಕೆ ಇರುವ ಹಿರಿಯ ಅಂಗಳದ ಮಧ್ಯದಲ್ಲಿ ನಾಲ್ಕು ಹಿರಿಯ ವಿಜಯನಗರ ಶೈಲಿಯ ಕಂಬಗಳಿವೆ. ಅಂಗಳದ ಉತ್ತರ ದಿಕ್ಕಿನ ಗೋಡೆಯನ್ನು ಕೊರೆದು ಪ್ರದಕ್ಷಿಣ ಪಥಕ್ಕೆ ಜೋಡಿಸಲಾಗಿದೆ. ಉತ್ತರ ದಿಕ್ಕಿನ ಗೋಡೆಯ ಎದುರಿಗೆ ದಕ್ಷಿಣಾಮೂರ್ತಿಯ ವಿಗ್ರಹವಿದ್ದು ಪೂರ್ವದಿಕ್ಕಿನ ಗೋಡೆಯ ಎದುರಿಗೆ ಆಲಿಂಗನ ಚಂದ್ರಶೇಖರ ಮೂರ್ತಿ ಹಾಗೂ ಸೂರ್ಯರುಗಳ ವಿಗ್ರಹಗಳಿವೆ. ಈ ಅಂಗಳದ ಪಶ್ಚಿಮದಲ್ಲಿನ ಉದ್ದನೆಯ ಓಣಿಯಲ್ಲಿ ಆಲಯದ ಉತ್ಸವ ಮೂರ್ತಿಗಳನ್ನಿಡಲಾಗಿದೆ.

ಈ ದೇವಾಲಯದಲ್ಲಿ ಕಂಡುಬರುವ ಪಟ್ಟಿಮಾಡಿರುವ ವಿಗ್ರಹಗಳು ಶಿಲ್ಪಶಾಸ್ತ್ರ ದೃಷ್ಟ್ಯಾ ಪ್ರಮುಖವಾಗಿವೆ. ಕುಮಾರಸ್ವಾಮಿ ಹಿಂದೆಯೇ ಹೇಳಿರುವಂತೆ ಅಂಗಳದ ಹಿಂಭಾಗದಲ್ಲಿನ ಸಣ್ಣ ಗುಡಿಯ ಗೋಡೆಯಲ್ಲಿ ಸೇರಿಹೋದ ವಿಗ್ರಹ. ಆರು ತಲೆಗಳೂ ಹನ್ನೆರಡು ಕೈಗಳೂ ಇರುವ ಕುಮಾರಸ್ವಾಮಿ ತನ್ನ ವಾಹನವಾದ ನವಿಲಿನ ಮೇಲೆ ಎಡಗಾಲನ್ನು ಮಡಚಿ ಕುಳಿತು, ಬಲಗಾಲನ್ನು ಅದರ ಬದಿಯಲ್ಲಿ ಇಳಿ ಬಿಟ್ಟಿದ್ದಾನೆ. ವಜ್ರ, ಖಡ್ಗ, ಬಾಣ, ಗಳನ್ನು ಬಲಗೈಗಳಲ್ಲೂ, ತ್ರಿಶೂಲ, ಧನಸ್ಸು ಮೊದಲಾದವನ್ನು ಎಡಗೈಗಳಲ್ಲೂ ಹಿಡಿದಿದ್ದಾನೆ. ಬಲಕ್ಕೆ ಇರುವ ಕೆಳಗಣ ಕೈ ಅಭಯ ಹಸ್ತ ಹಾಗೂ ಎಡದ ಕೆಳಗೈ ವರದ ಹಸ್ತಗಳಾಗಿವೆ. ದೇವಸೇನೆ ಹಾಗೂ ವಳ್ಳಿಯರು ಸ್ವಾಮಿಯ ಎರಡೂ ಕಡೆಗಳಲ್ಲಿದ್ದಾರೆ.

ಕುಮಾರಸ್ವಾಮಿಯ ಇನ್ನೊಂದು ವಿಗ್ರಹವನ್ನು ಕಪಿಲೇಶ್ವರ ಸ್ವಾಮಿಯ ಅಂತರಾಳದ ಎಡಭಾಗದಲ್ಲಿ ಪೀಠದ ಮೇಲಿಡಲಾಗಿದೆ. ನವಿಲಿನ ಮುಂದೆ ಸಮಭಂಗಿಯಲ್ಲಿ ನಿಂತ ಈತನಿಗೆ ನಾಲ್ಕು ಕೈಗಳು. ಬಲದ ಮೇಲಿನ ಕೈಯಲ್ಲಿ ತ್ರಿಶೂಲವನ್ನು ಎಡದ ಮೇಲಿನ ಕೈಯ್ಯಲ್ಲಿ ವಜ್ರಾಯುಧವನ್ನೂ ಹಿಡಿದಿದ್ದಾನೆ. ಬಲದ ಕೆಳಗೈ ಅಭಯ ಮುದ್ರೆಯಲ್ಲೂ ಎಡದ ಕೆಳಗೈ ಕಟಿಹಸ್ತವಾಗಿಯೂ ಇವೆ.

**ದಕ್ಷಿಣಾಮೂರ್ತಿ :**

ಈ ದೇವತೆಗೆ ನಾಲ್ಕು ಕೈಗಳಿವೆ. ಬಲದ ಮೇಲುಗೈಯಲ್ಲಿ ನಾಗವನ್ನೂ ಎಡದ ಮೇಲುಗೈಯ್ಯಲ್ಲಿ ತ್ರಿಶೂಲವನ್ನೂ ಹಿಡಿದಿದ್ದಾನೆ. ಬಲದ ಕೆಳಗೈ ಚಿನ್ಮುದ್ರೆಯಲ್ಲೂ, ಎಡದ ಕೆಳಗೈ ಪುಸ್ತಕಧಾರಿಯಾಗಿಯೂ ಇವೆ. ಪದ್ಮಾಸನಸ್ಥರಾದ ಇಬ್ಬರು ಗಡ್ಡಧಾರೀ ಋಷಿಗಳು ಎರಡೂ ಬದಿಯಲ್ಲಿ ಕುಳಿತಿದ್ದಾರೆ.

**ಆಲಿಂಗನ ಚಂದ್ರಶೇಖರ:**

ಶಿವಪಾರ್ವತಿಯರು ಭದ್ರಾಸನದಲ್ಲಿ ಕುಳಿತಿದ್ದಾರೆ. ಶಿವನ ಬಲ ಮೇಲುಗೈ ಪರಶುವನ್ನು ಹಿಡಿದಿದೆ. ಎಡ ಮೇಲುಗೈ ಮೃಗವನ್ನು ಹಿಡಿದಿದ್ದು, ಬಲ ಕೆಳಗೈ ಅಭಯ ಮುದ್ರೆಯಲ್ಲಿದ್ದು, ಎಡ ಕೆಳಗೈಯಲ್ಲಿ, ತನ್ನ ಎಡ ತೊಡೆಯ ಮೇಲೆ ಕುಳಿತಿರುವ ದೇವಿಯನ್ನು ಆಲಂಗಿಸಿದ್ದಾನೆ.

**ಸೂರ್ಯ :**

ಭುಜಗಳವರೆಗೆ ಮೇಲೆದ್ದಿರುವ ತನ್ನ ಎರಡೂ ಕೈಗಳಲ್ಲಿ ಕಮಲಗಳನ್ನು ಹಿಡಿದ ಈ ದೇವತೆ ಸಮಭಂಗಿಯಲ್ಲಿ ನಿಂತಿದ್ದಾನೆ.

**ಕಾಮಾಕ್ಷಿ:**

ದಿವ್ಯವಾದ ದ್ವಿಭಂಗಿ ಮುದ್ರೆಯಲ್ಲಿ ನಿಂತ ಈ ದೇವಿ ಬಲ ಮೇಲುಗೈಯ್ಯಲ್ಲಿ ಅಂಕುಶವನ್ನೂ ಎಡ ಮೇಲುಗೈಯಲ್ಲಿ ಪಾಶವನ್ನೂ ಹಿಡಿದು, ಬಲ ಕೆಳಗೈ ಅಭಯ ಮುದ್ರೆಯಲ್ಲೂ, ಎಡ ಕೆಳಗೈ ವರದ ಹಸ್ತವಾಗಿಯೂ ಇವೆ.

ಮೇಲೆ ವಿವರಿಸಿದ ವಿಗ್ರಹಗಳನ್ನೆಲ್ಲ ಚೋಳರ ಕಾಲಕ್ಕೆ ಸೇರಿಸಬಹುದು. ಗರ್ಭಗೃಹ ಮತ್ತು ಅಂತರಾಳಗಳು ವಾಸ್ತು ಶಿಲ್ಪ ರೀತ್ಯಾ ಚೋಳರ ಕಾಲಕ್ಕೆ ಸೇರಿದವುಗಳೆಂದು ನಿರ್ಧರಿಸಬಹುದು. ಮುಖಮಂಟಪ ಮುಂದಿನ ಅಂಗಳ, ದಕ್ಷಿಣದ ಅಂಗಳಗಳು ನಂತರದ ವಿಜಯನಗರದ ಕಾಲದಲ್ಲಿ ಸೇರಿಸಲ್ಪಟ್ಟವುಗಳಾಗಿವೆ. ★



ಕಪಿಲೇಶ್ವರಸ್ವಾಮಿ ದೇವಾಲಯದ ಪಾರ್ಶ್ವನೋಟ (ಸಂಧ್ಯಾವಂದನ ಮಂಟಪ)

ಮೂಲ :
**ಡಾ॥ ವಿ. ಕಾಮೇಶ್ವರರಾವ್**
ಅನುವಾದ:
**ಶ್ರೀ ಬಿ. ಎನ್. ಶ್ರೀನಿವಾಸನ್** ಎಂ.ಎ.

# ಗೃಹಲಕ್ಷ್ಮಿ

# ಅನುಭಾವಿ ಆಂಡಾಳ್

ಶ್ರೀವಿಷ್ಣುಚಿತ್ತ ಕುಲನಂದನ
ಕಲ್ಪವಲ್ಲೀಂ
ಶ್ರೀರಂಗರಾಜ ಹರಿಚಂದನ
ಯೋಗ ದೃಶ್ಯಾಂ
ಸಾಕ್ಷಾತ್ ಕ್ಷಮಾಂಕರುಣಯಾ
ಕಮಲಾಮಿವಾನ್ಯಾಂ
ಗೋದಾಮನನ್ಯ
ಶರಣಶ್ಶರಣಂ ಪ್ರಪದ್ಯೇ ||

ಎಂದು ವೇದಾಂತದೇಶಿಕರು ಹಾಡಿರುವ ಗೋದಾಸ್ತುತಿಯು ಆಂಡಾಳಿನ ಹಿರಿಮೆ ಗರಿಮೆ ಮಹಿಮೆಗಳ ಪ್ರತೀಕವಾಗಿದೆ. ಶ್ರೀರಂಗನಾಥನ ಪ್ರೇಮಾರಾಧಕಳಾದ ಆಂಡಾಳಿನ ತಿರುಪ್ಪಾವೈ ಮತ್ತು ನಾಚ್ಚಿಯಾರ್ ತಿರುಮೊಳಿ ಕೃಷ್ಣಪ್ರೇಮಭರಿತವಾದುವು; ಭಗವದ್ಭಕ್ತಿಯ ಕಳಶ. ಇವಳ ಕೃತಿ ತಿರುಮೊಳಿ ಒಂದು ಉತ್ಕೃಷ್ಟ ಆಧ್ಯಾತ್ಮಿಕ ಪ್ರೇಮಗೀತೆ. ತಿರುಪ್ಪಾವೆಯಲ್ಲಿಯಾದರೊ ಎಂದು ಕರೆಯಬಹುದು. ಆದರೆ ಶುಷ್ಕ ತತ್ತ್ವೋಪದೇಶದ ಕೃತಿಯಲ್ಲ. ಇದು ಉತ್ಕೃಷ್ಟ ಆಧ್ಯಾತ್ಮಿಕ ಭಾವಗೀತೆ. ಆಂಡಾಳಿನ ಭಗವತ್ ಕೈಂಕರ್ಯಕ್ಕೆ ಈ ಒಂದು ಪಾಶುರವೇ ಸಾಕು– "ನಿಮ್ಮ ಮನೆ ಹಿತ್ತಲ ತೋಟದ ಬಾವಿಯಲ್ಲಿ ಸೌಗಂಧಿಕೆ ಬಾಯ್ದೆರೆಯಿತು. ನೈದಿಲೆಯು ಬಾಯ್ ಮುಚ್ಚಿತು; ಕಾವಿ ಬಟ್ಟೆಯ ಬಿಳಿಹಲ್ಲ ತಾಪಸಿಗಳು ತಮ್ಮ ಗುಡಿಗಳ ಬಾಗಿಲನ್ನು ತೆರೆಯಲು ಹೋಗುತ್ತಿರುವರು. ನಮ್ಮನ್ನು ಮೊದಲೇ ಎಬ್ಬಿಸುವುದಾಗಿ ಮಾತಿತ್ತ ಹೆಣ್ಣೆ; ಏಳು, ನಾಚಿಕೆಯಿಲ್ಲದವಳೆ, ನಾಲಿಗೆಯುಳ್ಳವಳೆ; ಶಂಖಚಕ್ರಧರಿಸಿದ ಹಿರಿಗೈಯ ಪಂಕಜನೇತ್ರನನ್ನು ಹಾಡೋಣ; ಆರೈದು ಕೇಳೆನ್ನ ಹೆಣ್ಣೆ".

ನಿಸ್ವಾರ್ಥದಿಂದ ಭಗವತ್ಸೇವೆ ಮಾಡುವುದೇ ಪ್ರಸನ್ನನ ಪರಮ ಪುರುಷಾರ್ಥ. ಮೊದಲಿನಿಂದ ಕೊನೆಯವರೆಗೆ ಮೇಳೈಸಿದ್ದು ಕಾಣುವ ಒಂದೇ ಒಂದು ಪರಮಭಾವ ಪರಮೋದ್ದೇಶ ಎಂದರೆ ಭಗವತ್ಸೇವೆ, ಭಗವತ್ ಕೈಂಕರ್ಯ. ಆ ಗೀತೆಯ ವಾತಾವರಣ ಕೈಂಕರ್ಯ ವಾತಾವರಣ. ಮೊದಲ ಪಾಶುರದಲ್ಲಿ ಹೇಳಿರುವ "ನಾರಾಯಣನೇ ನಮಗೆ ಹರೆಯನ್ನು (ಕೈಂಕರ್ಯ) ಕೊಡುವನು" ಎಂಬ ಭಾವವೇ ಕೊನೆಯ ಪಾಶುರದಲ್ಲಿ "ಚೆಂದೊಡಿಗೆಯ ಚೆಲುವೆಯರು ಸಂದು ಸೇವಿಸಿ ಅಲ್ಲಿ ಆ ಹರೆಯನ್ನು (ಕೈಂಕರ್ಯವನ್ನು) ಕೊಂಡ ಪರಿಯ" ಎಂದು ದೃಢಗೊಂಡಿದೆ.'ಎಂದೆಂದಿಗೂ ಏಳೇಳು ಜನ್ಮಕ್ಕೂ ನಿನ್ನೊಡನೆಂಟರಾಗುವೆವು; ನಿನಗೇ ನಾವು ಆಳಾಗಿರುವೆವು'. ಈ ಕೈಂಕರ್ಯ ಫಲಾಪೇಕ್ಷೆಯದಲ್ಲ, ಇದು ಕೈಂಕರ್ಯಕ್ಕಾಗಿ ಕೈಂಕರ್ಯ. ಈ ಗೀತೆ–ಕೈಂಕರ್ಯ ಗೀತೆ– ಭಗವತ್ಸೇವೆ ಅಲ್ಪಫಲಕ್ಕಾಗಿ ಅಲ್ಲ, ಪರಮ ಪುರುಷಾರ್ಥಕ್ಕಾಗಿ. ಈ ಹರೆಯನ್ನು ಕೊಳ್ಳ ಬಂದವರಲ್ಲ ಎನ್ನುವುದರಿಂದ ಹರೆ ಬರಿಯ ವಾದ್ಯವಲ್ಲ, ನಿತ್ಯ ಕೈಂಕರ್ಯದ ಸಂಕೇತ– "ಮುಂಬೆಳಗೆ ಬಂದು ನಿನ್ನ ಹೊಂದಾವರೆಯಡಿಯ ಹೊಗಳುವ ನಮ್ಮ ಆಶಯವ ಕೇಳಯ್ಯ; ದನ ಮೇಯಿಸಿ ಉಣ್ಣುವ ಕುಲದಲ್ಲಿ ಹುಟ್ಟಿದ ನೀನು ನಮ್ಮಿಂದ ಅಂತರಂಗ ಕೈಂಕರ್ಯ ಕೊಳ್ಳದೆ ಹೋಗುವುದು ತಗದು. ಇಂದು ಈ ಹರೆಯನ್ನು ಕೊಳ್ಳ ಬಂದವರಲ್ಲ ನಾವು, ಗೋವಿಂದ; ಎಂದೆಂದಿಗೂ ಏಳೇಳು ಜನ್ಮಕ್ಕೂ ನಿನ್ನೊಡನೆಂಟರು ನಾವಾಗಿರುವೆವು. ನಿನಗೇ ನಾವು ಆಳಾಗಿರುವೆವು. ಮತ್ತುಳಿದ ನಮ್ಮ ಆಸೆಗಳನ್ನು ಮಾಣಿಸು – ಆರೈದು ಕೇಳೆನ್ನ ಹೆಣ್ಣೆ". ಅಂದರೆ ಇವರ ಕೈಂಕರ್ಯ ಹಿಪ್ಪೊತ್ತಿನದಲ್ಲ, ಒಂದು ದಿನವಲ್ಲ, ಒಂದು ಜನ್ಮವಲ್ಲ, ಏಳೇಳು ಜನ್ಮವೂ.

ಅನುಭಾವಿ ಆಂಡಾಳ್ ರಂಗನಾಥನ ಆರಾಧಕಿ. ಇವಳ ಗುರಿ ಕೃಷ್ಣನನ್ನು ಒಲಿಸಿಕೊಳ್ಳುವುದು, ಅವನನ್ನು ಪಡೆಯುವುದೇ ಆಗಿತ್ತು. ಅವನನ್ನು ಎಷ್ಟು ಬಗೆಯಿಂದ ಪ್ರೀತಿಸಿ, ಸ್ತುತಿಸಿ, ಸೇವಿಸಿದರೂ ರಂಗನಾಥ, ಒಲಿಯಲಿಲ್ಲ, ಆಂಡಾಳಿನ ಚಿಂತೆ ಆತಂಕಗಳು ಪ್ರಬಲವಾದವು. ಹಿಂದೆ ಗೋಪಿಯರು ಕೃಷ್ಣನನ್ನು, ಅವನ ಪ್ರೇಮವನ್ನು, ಪಡೆಯುವುದಕ್ಕಾಗಿ ಆಚರಿಸಿದ ಕಾತ್ಯಾಯನೀ ವ್ರತವನ್ನು ತಾನೂ ಆಚರಿಸಿ ಅವನಲ್ಲೇ ಐಕ್ಯಳಾದಳು. ಇವರ ಈ ವಿವಾಹ ಆಧ್ಯಾತ್ಮಿಕ ವಿವಾಹವೇ ಹೊರತು ಲೌಕಿಕವಲ್ಲ. ಇವಳಲ್ಲಿ ಆತ್ಮರತಿಯೇ ಹೊರತು ದೈಹಿಕ ರತಿಯಲ್ಲ.

ತನ್ನ ಪ್ರಿಯನನ್ನು ಕರೆಯುವಂತೆ ಕೋಗಿಲೆಯನ್ನು ಕೋರುವುದು, ತನ್ನ ಮನದೊಲವನ್ನು ಪ್ರಿಯನಿಗೆ ತಲುಪಿಸುವಂತೆ ಮೋಡಗಳ ಮೊರೆ ಹೋಗುವುದು, ತಂಗಾಳಿ ತೀಡಿ, ತಿಂಗಳ ಬೆಳಕಿಂದ ವಿರಹವೇದನೆ ಉಲ್ಬಣಿಸುವುದು–ಇತ್ಯಾದಿ ವರ್ಣನೆಗಳಿಂದ ಪ್ರಾರಂಭವಾದ ಮಾನವ ಪ್ರೇಮ, ಅಂತ್ಯದಲ್ಲಿ ಉದಾತ್ತವಾಗಿ, ಪರಿಶುದ್ಧ ದೈವಭಕ್ತಿಯಾಗಿ ಮಾರ್ಪಟ್ಟಿರುವುದೇ ನಾಚ್ಚಿಯಾರ್ ತಿರುಮೊಳಿಯ ವೈಶಿಷ್ಟ್ಯ. ಪುರುಷೋತ್ತಮನಾದ ಈಶ್ವರನೊಬ್ಬನೇ ಪತಿ, ಮಿಕ್ಕ ಜೀವಾತ್ಮರೆಲ್ಲ ಸತಿಗಳು ಎಂಬ ಉನ್ನತ ಭಾವನೆ ಇದರ ತುಂಬ ಹರಡಿದೆ. ಈ ಜೀವಾತ್ಮ–ಪರಮಾತ್ಮ ಸಂಬಂಧದ ಪರಮ ತತ್ತ್ವವೇ ತಿರುಮೊಳಿಯ ವಿಷಯ.

ವಟಪತ್ರಶಾಯಿಯ ಪ್ರಿಯತಮೆ ಆಂಡಾಳ್ ಮೋಡಗಳನ್ನು ಭಗವಂತನೆಡೆಗೆ ದೂತರನ್ನಾಗಿ ಕಳಿಸುತ್ತಾಳೆ "ವಿರಹದಿಂದ ನನ್ನನ್ನು ಹೀಗೆ ಕೊರಗಿಸುವುದು ಅವನಿಗೆ ನ್ಯಾಯವಲ್ಲ. ನೀವು ಅವನೆಡೆಗೆ ಹೋಗಿ ನನ್ನ ನೋವನ್ನು ತಿಳಿಸಿ, ಅವನಿಗೆ ಬೇಗನೇ ಬಂದು ನನ್ನನ್ನು ಕೂಡಲು ಹೇಳಿ". ಮಳೆಗಾಲ ಪ್ರಾರಂಭವಾಗಿ ಸುತ್ತಲೂ ಹಸಿರು,

**ಶ್ರೀಮತಿ ಎ. ಎಸ್. ಪಂಕಜ, ಎಂ.ಎ.**

ಹೂಗಳನ್ನು ಕಂಡ ಆಂಡಾಳಿಗೆ ವಿರಹತಾಪ ಇನ್ನೂ ಉಲ್ಬಣವಾಗುತ್ತದೆ. ಸುತ್ತಲಿನ ಪ್ರಕೃತಿಯಲ್ಲರಳಿದ ಹೂಗಳಲ್ಲಿ ವೆಂಕಟಾಚಲಪತಿಯ ಅಸ್ತಿತ್ವವನ್ನೇ ಕಂಡು ವಿರಹಾಗ್ನಿ ಪ್ರಜ್ವಲಿಸಿ, "ಅಂದು ಮಂದರ ಪರ್ವತವನ್ನು ನೆಟ್ಟು ಮಧುರವಾದ ರಸ (ಅಮೃತ) ವನ್ನು ತೆಗೆದವನ, ಸುಂದರ ತೋಳಿನವನ ಬಲೆಯಿಂದ ಪಾರಾಗಿ ಬದುಕುವನೆ?" ಎಂದು ಹಾಡಿದ್ದಾಳೆ. ತಿರುಮಾಲಿರುಂಜೋಲೆಯ ದೇವನಿಗೆ ನೂರು ಬಾನೆ ತುಂಬ ಬೆಣ್ಣೆ, ನೂರು ಬಾನೆ ತುಂಬ ಸಕ್ಕರೆ ಪೊಂಗಲನ್ನು ಸಮರ್ಪಿಸುವುದಾಗಿ ಹರಕೆ ಕಟ್ಟುತ್ತಾಳೆ. "ರಂಗನಾಥನ ವಿರಹದಿಂದ ಕೃಶಳಾಗಿ ನನ್ನ ಕೈಬಳೆಗಳು ಕಳಚಿ ಬಿದ್ದವು. ನನ್ನ ಭಕ್ತಿಗೆ ಅವನು ಪ್ರಸನ್ನನಾಗಬೇಡವೇ? ವಿರಹದಿಂದ ಹೀಗೆ ನನ್ನನ್ನು ಸಮಯಿಸಿ ಕಾಡುವುದು ಅವನಿಗೆ ತರವಲ್ಲ. ಇಂದಲ್ಲ ನಾಳೆ ಬಂದಾನೆಂದು ಕಾದುದಣಿದೆ. ನನ್ನನ್ನೇ ಅವನಿರುವಲ್ಲಿಗೆ ಕರೆದುಕೊಂಡು ಹೋಗಿ. ಮಧುರೆಯಿಂದ ದ್ವಾರಕೆಯವರೆಗೆ ಇರುವ ಭಗವಂತನ ಯಾವುದಾದರೂ ಊರಿಗೆ ಹೋದರೆ ನನ್ನ ವಿರಹಾಗ್ನಿ ತಂಪಾದೀತು" ಎಂದು ಹಂಬಲಿಸುತ್ತಾಳೆ ಗೋದೆ. ಭಗವಂತ ಬರದಿದ್ದರೂ ಅವನ ಸಂಬಂಧದ ಯಾವುದಾದರೂ ವಸ್ತುವಿನ ಸ್ಪರ್ಶದಿಂದ ಇವಳ ಬೇಗೆ ತಣ್ಣಗಾದಿತು. ಅವನು ಧರಿಸಿದ ತುಳಸೀ ಮಾಲೆ, ಅವನ ಶಂಖ, ಅವನ ಪೀತಾಂಬರ ಅವನು ಕೊಳಲು ನುಡಿಸುವಾಗ ಬಾಯ ಇಕ್ಕೆಲದಿಂದ ಸುರಿವ ನೀರು– ಇದಾವುದನ್ನಾದರೂ ತಂದುಕೊಟ್ಟರೆ ತನ್ನ ಅಂತರಂಗದ ಜ್ವಾಲೆನಂದೀತು ಎಂದು ಬೇಡಿಕೊಳ್ಳುತ್ತಾಳೆ. ತಾನು ಸಾಕಿದ ಕೋಗಿಲೆಯ ಕಾಲಿಗೆರಗಿ ತನ್ನ ನಲ್ಲನನ್ನು ಕರೆಯುವಂತೆ ಬೇಡಿಕೊಳ್ಳುತ್ತಾಳೆ. "ಇಂದು ನಾರಾಯಣ ಬರುವಂತೆ ನೀನು ಕೂಗದಿದ್ದರೆ ನಿನ್ನನ್ನು ಇಲ್ಲಿಂದ ಅಟ್ಟಿಬಿಡುವೆ" ಎಂದು ಹೆದರಿಕೆ ಹಾಕುತ್ತಾಳೆ; ಕೋಗಿಲೆಗೆ. ಆಂಡಾಳಿಗೆ ಶಂಖವನ್ನು ಕಂಡರೆ ಅತೀವ ಅಸೂಯೆ. ಚಕ್ರಕ್ಕೆ ಕೊಂಚ ಕಾಲವಾದರೂ ಕೃಷ್ಣನ ಕರಕಮಲದಿಂದ ಅಗಲಿಕೆ ಉಂಟು – ಶತ್ರುಗಳ ನಾಶ ಮಾಡುವಾಗ; ಆದರೆ ಶಂಖಕ್ಕೆ ಈ ಬಗೆಯ ವಿರಹವೇ ಇಲ್ಲ. "ಹೆಣ್ಣುಗಡಣವೆಲ್ಲ ನಿನ್ನ ಮೇಲೆ ಬೊಬ್ಬೆ ಹಾಕುತ್ತಿದೆ". ಎಂದು ಹೇಳುವಲ್ಲಿ ಆಂಡಾಳಿನ ಈರ್ಷ್ಯೆ ವ್ಯಕ್ತವಾಗಿದೆ.

ಆಂಡಾಳ್ ಶಾಸ್ತ್ರೋಕ್ತವಾಗಿ ತನ್ನ ಆರಾಧ್ಯದೇವ ಶಂಖಚಕ್ರ ಗದಾಧಾರಿಯಾದ ಚತುರ್ಭುಜ ವಿಷ್ಣುನೊಂದಿಗೆ ತನ್ನ ಮದುವೆ ಯಾದಂತೆ ಕಂಡ ಕನಸನ್ನು ತನ್ನ ಗೆಳತಿಗೆ ಹೇಳಿದ್ದಾಳೆ–"ಸಾವಿರಾನೆ ಸುತ್ತುವರಿದು ನಾರಾಯಣನು ಊರ ಪ್ರದಕ್ಷಿಣೆ ಬಂದಾಗ, ತುಂಬಿದ ಹೊಂಗೊಡಗಳು ತೋರಣಗಂಬಗಳಿಂದ ಅವನನ್ನು ಎದುರುಗೊಂಡದ್ದನ್ನು ಕಂಡೆ. ದೇವಗಣವೆಲ್ಲ ಬಂದು ನನ್ನನ್ನು ಮದುವಣಗಿತ್ತಿ ಎಂದು ಕರೆಯಿತು. ದುರ್ಗಾದೇವಿ ನನಗೆ ಮಂತ್ರದುಡಿಗೆಯುಡಿಸಿ ಮದುವೆಮಾಲೆ ಮುಡಿಸಿದಂತೆ ಕನಸು ಕಂಡೆ. ವೇದ ಮಂತ್ರ ಘೋಷಣೆಯ ನಡುವೆ ಕೃಷ್ಣನಿಗೂ ನನಗೂ ಕಂಕಣ ಕಟ್ಟಿದರು. ವಾದ್ಯಗಳು ಮೊಳಗುತ್ತಿರಲು ಮುತ್ತಿನ ಹಾರಗಳು ತೂಗುತ್ತಿರುವ ಚಪ್ಪರದ ಕೆಳಗೆ ಮಧುಸೂದನ ನನ್ನ ಪಾಣಿಗ್ರಹಣ ಮಾಡಿದಂತೆ ಕನಸು ಕಂಡೆ. ನಂತರ ಸಿಟ್ಟೆದ್ದ ಮದಿಸಿದ ಆನೆಯಂತೆ ನನ್ನೊಡೆಯ ನನ್ನ ಪಾಣಿಗ್ರಹಣಮಾಡಿ ಅಗ್ನಿಪ್ರದಕ್ಷಿಣೆ ಮಾಡಿದನು. ಈ ಜನ್ಮಕ್ಕೂ ಏಳೇಳು ಜನ್ಮಕ್ಕೂ ನಮಗೆ ಆಧಾರವಾದ ನಮ್ಮೊಡೆಯ ತನ್ನ ಕೆಂಪಾದ ಸಿರಿಗೈಯಿಂದ ನನ್ನ ಕಾಲು ಹಿಡಿದು ಅಶ್ಮಾರೋಹಣ ಮಾಡಿಸಿದ ಕನಸು ಕಂಡೆ. ನನ್ನ ಹೊಳೆಮೊಗದ ಸೋದರರು ಬಂದ ಅಗ್ನಿಯನ್ನು ಪ್ರಜ್ವಲಿಸಿ, ನನ್ನನ್ನು ಮುಂದೆ ನಿಲ್ಲಿಸಿ ಸಿಂಹಮುಖದ ಅಚ್ಯುತನ ಕೈಯಲ್ಲಿ ನನ್ನ ಕೈಯಿರಿಸಿ ಅರಳು ಮೊಗೆದು ಸುರಿವ ಕನಸು ಕಂಡನೇ, ಗೆಳತಿ; ಕುಂಕುಮ ಹಚ್ಚಿಕೊಂಡು ಕುಳಿರುಗಂಧ ತೀಡಿ, ಸುಂದರವಾಗಿ ಸಿಂಗರಿಸಿದ ಬೀದಿಯಲ್ಲಿ, ಅವನೊಡನೆ ಆಡಿದೆ ಕನಸಿನಲ್ಲಿ". ಹೀಗೆ ಗೋಪಾಲನಿಗೆ ತಾನು ಮಡದಿಯಾದಂತೆ ಕನಸನ್ನು ತನ್ನ ಗೆಳತಿಗೆ ವಿವರಿಸಿದ್ದಾಳೆ ಗೋದೆ. ಹೀಗೆ ಆಂಡಾಳಿನ ಜೀವನ ವಿರಹ–ಸಮಾಗಮಗಳ ಸಂಗಮವಾಗಿದೆ.

ಲೌಕಿಕ ದೃಷ್ಟಿಯಿಂದ ಎರಡು ಜೀವಗಳ ಸಮರಸಕ್ಕೆ, ಏಕೀಭಾವಕ್ಕೆ ಮದುವೆಯೇ ನಿದರ್ಶನ. ಇದನ್ನೇ ಆಧ್ಯಾತ್ಮಿಕ ದೃಷ್ಟಿಯಿಂದ ಜೀವಾತ್ಮ–ಪರಮಾತ್ಮರ ಸಂಬಂಧ ಮಿಲನ ಎಂದು ಹೇಳಬಹುದು. ಜೀವಾತ್ಮ ಪರಮಾತ್ಮನೊಡನೆ ಐಕ್ಯದಲ್ಲಿರುವುದು ದೈಹಿಕ ಮಾನಸಿಕ ರತಿಯಲ್ಲ, ಇಲ್ಲಿರುವುದು ಆತ್ಮರತಿ. ಒಂದು ಆತ್ಮ ಪರಮಾತ್ಮನೊಡನೆ ಐಕ್ಯವಾಗುವುದೇ ಆಧ್ಯಾತ್ಮಿಕ ತತ್ತ್ವ, ಅನುಭಾವ ತತ್ತ್ವ. ಆಂಡಾಳಿನ ಕೃತಿ ತಿರುಪ್ಪಾವೈ ಯಲ್ಲಿ ಅವಳು ಗೊಲ್ಲವಾಡಿಯ ಹೆಂಗಳೆಯರನ್ನು ಎಬ್ಬಿಸುವುದು ಒಂದು ಸಂಕೇತ ಅಷ್ಟೆ. ಆ ರೂಪಕದಿಂದ ಅವಳು ಜೀವಾತ್ಮರೆಲ್ಲರನ್ನೂ ಎಬ್ಬಿಸಿ, ಪರಮಾತ್ಮನೊಡನೆ ಐಕ್ಯವಾಗಲು ಕರೆಯುತ್ತಿದ್ದಾಳೆ ಎಂದು ಅರ್ಥೈಸ ಬೇಕು. ಹೀಗೆ ಐಕ್ಯವಾಗುವಾಗ, ಪರಮಾತ್ಮನ ಕೈಂಕರ್ಯ ಮಾಡುವಾಗ, ಎಲ್ಲ ಜೀವಾತ್ಮಗಳೂ ಒಂದೇ; ಯಾರೂ ಇದರಲ್ಲಿ ಹಿಂದುಳಿಯಬಾರದು. ಆದ್ದರಿಂದಲೇ ಎಲ್ಲರನ್ನು, ಮಲಗಿದವರನ್ನು ಎಬ್ಬಿಸಿ ಕರೆದು ಕೊಂಡು ಹೋಗುತ್ತಾಳೆ,



## “ಮಾನವ”

ಸಂಸ್ಕೃತದ ಏಕಾಕ್ಷರ ಪದಗಳಲ್ಲಿ ಕೆಲವು
ಅನೇಕಾರ್ಥಗರ್ಭಿತಗಳು! ಅಕ್ಷರವಾಕ್ಯಗಳು!

ಮಾ–ನ–ವ ಎಂಬ ಮೂರು ಪದಗಳತ್ತ ಗಮನಹರಿಸೋಣ.

“ಮಾ” ಎಂದರೆ ಬೇಡ ಎಂಬರ್ಥ
“ನ” ಎಂದರೆ ಇಲ್ಲ–ಅಲ್ಲ ಎಂಬರ್ಥ
“ವಾ” ಎಂದರೆ, ಅಥವಾ ಎಂಬುದರ ಸೂಕ್ಷ್ಮರೂಪ.

ಈ ಮೂರಕ್ಷರಗಳು ಸೇರಿಯೇ “ಮಾನವ” ಶಬ್ದ ಆಗಿರಬಹುದೇ?

ಮನುಷ್ಯನಿಗೆ “ಮಾ” ಎನ್ನುವ ನಿಷೇಧ ಸಂಹಿತೆ!
“ನ” ಎನ್ನುವ ನಕಾರಾತ್ಮಕ ವ್ಯಾವರ್ತನೆಗಳು!
“ವಾ” ಎನ್ನುವ ‘ಅದು’ ಅಥವಾ ‘ಇದು’ಗಳ ಆಯ್ಕೆ!
ಹೀಗೆ ಮಾನವನ್ನು ಕಾಯ್ದುಕೊಳ್ಳುವ ಅಗತ್ಯ.

‘ಮಾನ’ವ ಬಿಟ್ಟರೆ ಮಾನವ ಮಾನವನಲ್ಲ ಎನ್ನುವ ಮಾತು! ಈ ಎಲ್ಲ ಮೀಮಾಂಸೆಗಳು ಮಾನವನನ್ನು ಎಷ್ಟು ಬಂಧಿಸಿವೆ, ಎಷ್ಟು ವಿವೇಚಿಸಿವೆ ಎನ್ನುವುವಲ್ಲವೇ? ವಿಚಾರಿಸಿದಾಗ—

ಮಾನವ ಕಾಯ್ದು ಮಾನವನಾಗು, ದಾನವನಾಗದಿರು
ಮಾ-ನ-ವಾ ಗಳನ್ನು ಎಷ್ಟುಬೇಕೋ ಅಷ್ಟು ಉಳಿಸಿ, ಬೆಳೆಸಿ, ಬಳಸಿ, ಗಳಿಸಿ
ತಿಳಿಸಿ, ತಿಳಿದು, ಅನುಸರಿಸಿ, ಅನುಕರಿಸಿ ದೇವತ್ವಕ್ಕೇರು.

ಎಲಾ ಮಾನವಾ! “ನೀನಾರಿಗಾದೆಯೋ?” ಎನ್ನುವ ಪ್ರಶ್ನೆಗೆ, ನೇರ ಉತ್ತರಿಸುವ ಧೈರ್ಯ ನಿನಗಿದೆಯೇನು? ಆಲೋಚಿಸು.

**ಶ್ರೀ ಕೆ. ಸುಬ್ರಮಣ್ಯಭಟ್ಟ**

ನೀರಾಟವಾಡಲು. ಈ ನೀರಾಟವು ಸಂಕೇತ ಪೂರ್ಣವಾದದ್ದು. ಇದು ಭಗವದ್ ಭಕ್ತಿರಸ ಪೂರ್ಣವಾದದ್ದು, ಇದರಲ್ಲಿ ಪಾಲುಗೊಳ್ಳಲು ಎಲ್ಲರೂ ಸಮಾನರೇ. ಶತ್ರು, ಮಿತ್ರರೆಂಬ, ಗಂಡು ಹೆಣ್ಣೆಂಬ ಭೇದವಿಲ್ಲ “ಕೂಡಾರೈ ವೆಲ್ಲುಂಶೀರ್ ಗೋವಿಂದ” ಎಂಬ ಪಾಶುರ ವನ್ನು ಇಲ್ಲಿ ನೆನೆಯಬಹುದು. ಹೀಗೆ ಸಾಮಾನ್ಯ ಮಾನವ ಪ್ರೇಮ ಉದಾತ್ತವಾಗಿ ಪವಿತ್ರವಾಗಿ, ಪರಿಶುದ್ಧ ದೈವ ಪ್ರೇಮ ವಾಗಿ ಪರಿಣಾಮಗೊಂಡಿರುವುದೇ ಆಂಡಾಳಿನ ಎರಡು ಕೃತಿಗಳ ವೈಶಿಷ್ಟ್ಯ. ಸಾಮಾನ್ಯ ಸತಿ–ಪತಿ ಸಂಬಂಧ, ಉನ್ನತ ಮಟ್ಟದಲ್ಲಿ ಜೀವಾತ್ಮ–ಪರಮಾತ್ಮ ಸಂಬಂಧವಾಗಿ ಸುಂದರವಾಗಿ ಚಿತ್ರಿತವಾಗಿದೆ.

ಹೀಗೆ ತಮಿಳುನಾಡಿನ ವೈಷ್ಣವ ಸಂತ ರಾದ 12 ಜನ ಆಳ್ವಾರುಗಳಲ್ಲಿ ಸ್ತ್ರೀ ಆಳ್ವಾರ್ ಒಬ್ಬಳೇ ಆದ ಆಂಡಾಳ್ ಭಗ ವದ್ ಭಕ್ತಿ, ಅಚಲನಿಷ್ಠೆ ಗುರುವಿನಲ್ಲಿ ಗೌರವ, ಪರಮಾತ್ಮ–ಪಾತಿವ್ರತ್ಯ ಈ ಎಲ್ಲಾ ದೃಷ್ಟಿಯಲ್ಲೂ ಭಾರತ ಧರ್ಮ ಸಂಸ್ಕೃತಿಗಳ ಪ್ರತೀಕವಾಗಿದ್ದಾಳೆ. ಇವಳ ದಿವ್ಯಾನುಭಾವ, ಆತ್ಮಸ್ಫೂರ್ತಿ, ಕಾವ್ಯ ಪ್ರತಿಭೆ, ಹಾಗೂ ವ್ಯಕ್ತಿತ್ವಗಳು ಅದ್ವಿತೀಯವಾದದು. ಇವಳ ಕೃತಿ ‘ತಿರುಪ್ಪಾವೈ’ ಬಗ್ಗೆ ಆಚಾರ್ಯತ್ರಯ ರಲ್ಲಿ ಒಬ್ಬರಾದ ರಾಮಾನುಜಾಚಾರ್ಯರು “ತಿರುಪ್ಪಲ್ಲಾಂಡಿಗೆ ಅಧಿಕಾರಿ ಸಿಕ್ಕರೂ ಸಿಗ ಬಹುದು, ತಿರುಪ್ಪಾವೈಗೆ ಸಿಕ್ಕುವುದಿಲ್ಲ. ಹತ್ತು ಆಳ್ವಾರುಗಳ ಸಾರಭೂತೆಯಾದ ಗೋದಾದೇವಿ ತಾನೇ ಹೇಳಬೇಕು, ತಾನೇ ಕೇಳಬೇಕು” ಎಂದು ಹೇಳಿರುವುದು ಎಷ್ಟು ಸತ್ಯಸಂಗತಿಯಾಗಿದೆ. ಸದಾಚಾರ ದೃಢ ನಿಷ್ಠೆ ಮಧುರ ಭಕ್ತಿಗಳ ಸಾಕಾರ ಮೂರ್ತಿ ತ್ಯಾಗಮಯಿ ಆಂಡಾಳ್ ಇಂದಿಗೂ ಅಮರ ಳಾಗಿದ್ದಾಳೆ. ಅವಳ ಪಾಶುಗರಳ ಮೂಲಕ. ಅವಳ ಭಕ್ತಿ ಎಷ್ಟು ಪವಿತ್ರವೋ ಎಷ್ಟು ಶುದ್ಧವೋ ಅವಳ ಚರಿತ್ರೆಯೂ ಅಷ್ಟೇ ಶುದ್ಧ. ತನ್ನ ಸ್ಫುರದ್ರೂಪಕ್ಕಿಂತ ಹೆಚ್ಚಾಗಿ ಭಕ್ತಿಯಿಂದ ಶುದ್ಧ ಸರಳ ಪವಿತ್ರ ಅಂತಃ ಕರಣದಿಂದ ಎಲ್ಲರ ಮನಸ್ಸನ್ನೂ ಸೂರೆ ಗೊಂಡಿದ್ದಾಳೆ ಗೋದಾದೇವಿ.

———

# ಶ್ರೀರಾಮನ ಆದರ್ಶ ವ್ಯಕ್ತಿತ್ವ

ಶ್ರೀ ಡಿ. ಕೃಷ್ಣಯ್ಯಂಗಾರ್

ಜಗತ್ತಿನ ಜನಾಂಗದಲ್ಲಿ ಇಂದು ನಿತ್ಯವೂ ಹೋರಾಟ ನಡೆಯುತ್ತಿದೆ. ಆಸ್ತಿಪಾಸ್ತಿಗಳನ್ನು ಗಳಿಸಿ ಶ್ರೀಮಂತರೆನ್ನಿಸಿಕೊಳ್ಳುವ ಹವ್ಯಾಸ ಬೆಳೆಯುತ್ತಿದೆ. ಇಷ್ಟೇ ಅಲ್ಲ. ಈ ಭೂಮಿ ನಮ್ಮದು, ಆ ರಾಜ್ಯ ನಮ್ಮದು ಎಂಬ ಭಾವನೆ ಹುಟ್ಟಿ ಇದಕ್ಕಾಗಿ ಯುದ್ಧವೇ ಆಗುತ್ತಿದೆ. ಈ ಹೋರಾಟ, ಹೊಡೆದಾಟ ಹೋಗಿ ಜನರು ನೀತಿವಂತರಾಗಿ, ಸಹಬಾಳ್ವೆಯಿಂದ ಇರಬೇಕಾದರೆ ಪ್ರಾಚೀನ ಮಹಾನ್‌ವ್ಯಕ್ತಿಗಳ ಮಾರ್ಗದರ್ಶನ ಅತ್ಯಗತ್ಯ. ಮಾನವರು ಶಾಂತರೀತಿಯಲ್ಲಿ, ಸತ್ಯರೀತಿಯಲ್ಲಿ, ಆದರ್ಶರೀತಿಯಲ್ಲಿ ಜೀವನನಡೆಯಿಸಿ, ಸುಖವಾಗಿ ಬಾಳುವುದಕ್ಕೆ ಏನೇನು ಬೇಕೋ ಅವೆಲ್ಲವನ್ನೂ ಶ್ರೀರಾಮನ ಚರಿತ್ರೆಯಿಂದ ಕಲಿಯಬಹುದು. ತಿಳಿಯಬಹುದು, ಇಂತಹ ಉತ್ತಮ ಗುಣವು ಶ್ರೀರಾಮನ ಚರಿತ್ರೆಯಾದ ಶ್ರೀಮದ್ರಾಮಾಯಣದಲ್ಲಿರುವುದರಿಂದಲೇ, ಇದು ಎಲ್ಲ ಕಾಲಕ್ಕೂ, ಎಲ್ಲದೇಶಗಳಿಗೂ, ಎಲ್ಲ ಜನರಿಗೂ ಆದರ್ಶಪ್ರಾಯವಾಗಿದೆ.

ಮಾನವರಲ್ಲಿ ಜೀವಾತ್ಮ ಪರಮಾತ್ಮ ಸಂಬಂಧ ಇದೆ ಎಂಬುದು ನಮ್ಮ ನಂಬಿಕೆ. ಅಂದರೆ ಮಾನವಸಹಜತ್ವ, ದೈವತ್ವಗಳ ಮಿಳನ ಮಾನವ ಎಂದಾಯಿತು. ಮಾನವ ಸಹಜ ಗುಣವೇ ಹೆಚ್ಚಾಗಿದ್ದರೆ, ಅಂತಹವನು ಸಾಮಾನ್ಯ ವ್ಯಕ್ತಿಯಾಗಿಯೇ ಇರುತ್ತಾನೆ. ದೇವಗುಣ ಹೆಚ್ಚಾಗಿದ್ದರೆ, ಅಂತಹವನು ಇತರರಿಗೆ ಮಾರ್ಗದರ್ಶಕನಾಗುತ್ತಾನೆ. ಆದರ್ಶಯುತ ಮಾನವನಾಗುತ್ತಾನೆ. ಒಬ್ಬವ್ಯಕ್ತಿಯು ಆದರ್ಶ ಪುರುಷನಾಗಬೇಕಾದರೆ, ಅಂತಹವನಲ್ಲಿ ದೇವಗುಣ ಹೆಚ್ಚಾಗಿದೆ ಎಂದಾಯಿತು. ಆದರೆ ಅಂತಹ ಮಾನವನು, ಜನಿಸುವಾಗಲೇ ಸರ್ವಗುಣ ಪರಿಪೂರ್ಣ, ವಿದ್ಯಾವೈಭವಿ, ಜ್ಞಾನಿ ಎಂದು ತಿಳಿಯುವುದಕ್ಕೆ ಪ್ರತಿಯಾಗಿ ಅವನು ಮಾತಾಪಿತೃಗಳಿಂದ ಪರಿಪೋಷಿಸಲ್ಪಟ್ಟವನು, ಗುರುಮುಖೇನ ವಿದ್ಯಾಭ್ಯಾಸ ಮಾಡಿದವನು, ಇದರಿಂದ ಜ್ಞಾನ ಸಂಪಾದಿಸಿದ್ದಾನೆ. ಮಾನವರಿಗೆ ಸಹಜವಾಗಿ ಬರತಕ್ಕ ಕಷ್ಟ–ನಷ್ಟ, ದುಃಖ–ಸಂಕಟ, ಕರುಣೆ–ಉದ್ರೇಕ, ಹಾಸ್ಯ–ವಿನೋದ, ಸುಖ–ಶಾಂತಿ ಇವೆಲ್ಲವನ್ನೂ ಯಶಸ್ವಿಯಾಗಿ ಎದುರಿಸಿ, ಇತರರಿಗೆ ಸೌಖ್ಯವಾಗಬಹುದಾದ ರೀತಿಯಲ್ಲಿ ಜೀವನ ನಡೆಸಿ, ಸರ್ವಾದರಣೀಯ ವ್ಯಕ್ತಿಯಾಗಿದ್ದಾನೆ ಎಂದು ತಿಳಿಯುವುದು ಸಹಜವಾಗಿದೆ. ಈ ದೃಷ್ಟಿಯಿಂದ ನಾವು ಶ್ರೀರಾಮ ಚರಿತ್ರೆಯನ್ನು ಮನನ ಮಾಡಬೇಕು.

ಭಾರತೀಯ ಜೀವನದಲ್ಲಿ ಶ್ರೀಮದ್ರಾಮಾಯಣವು ಹಾಸು ಹೊಕ್ಕಿನಂತೆ ಹೊಂದಿಕೊಂಡಿದೆ. ರಾಮಾಯಣದ ಕಥೆಯನ್ನೋ, ಕಾವ್ಯಲಕ್ಷಣವನ್ನೋ, ತತ್ತ್ವವನ್ನೋ, ವರ್ಣನೆಯನ್ನೋ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಉಪಯೋಗಿಸಿಕೊಂಡು, ತಮ್ಮದೇ ಆದ ಕೃತಿಗಳನ್ನು ರಚಿಸಿದ್ದಾರೆ. ಮಾನವರ ಮನಸ್ಸನ್ನು ಆಕರ್ಷಿಸಿದ್ದಾರೆ. ಶ್ರೀಮದ್ರಾಮಾಯಣವನ್ನು ರಚಿಸುವಾಗ, ಮಹರ್ಷಿ ವಾಲ್ಮೀಕಿ, ತನ್ನದೇ ಆದ ಶ್ರೇಷ್ಠ ರೀತಿಯ ವೈಶಿಷ್ಟ್ಯವನ್ನು ತೋರಿಸಿದ್ದಾನೆ. ಪಾತ್ರ ಸೃಷ್ಟಿಯ ವೈಚಿತ್ರ್ಯದಲ್ಲಿ, ಭಾವನಾವೈವಿಧ್ಯತೆಯಲ್ಲಿ, ಭಾಷಾಸಂಪತ್ತಿಯಲ್ಲಿ, ವರ್ಣನಾ ಸಾಮರ್ಥ್ಯದಲ್ಲಿ, ಉಪಮಾನ–ಉಪಮೇಯಗಳಲ್ಲಿ–ಮಹರ್ಷಿ ಆದಿಕವಿಯು ಅನುಪಮ ರೀತಿಯ ಪಾಂಡಿತ್ಯವನ್ನೂ, ಅದ್ಭುತ ರೀತಿಯ ಕೌಶಲ್ಯವನ್ನೂ ವ್ಯಕ್ತಪಡಿಸಿದ್ದಾನೆ. ಈ ಎಲ್ಲ ರೀತಿಯಿಂದ ಅವನು ರಚಿಸಿದ ಕಾವ್ಯ ಆದಿಕಾವ್ಯ. ಅವನು ಆದಿಕವಿ.

ಕವಿಯು ತನ್ನ ಕಾವ್ಯದ ನಾಯಕನಲ್ಲಿ ಮಾನವ ಸಹಜವಾದ ಭಾವನೆಗಳನ್ನು ವ್ಯಕ್ತಪಡಿಸಿ, ಸಾಮಾನ್ಯ ಮಾನವರಲ್ಲಿ ಉಂಟಾಗಬಹುದಾದ, ಕೋಪ, ಮೋಹ, ಚಾಪಲ್ಯಗಳನ್ನು ಯಶಸ್ವಿಯಾಗಿ ಎದುರಿಸಿ, ಲೋಪದೋಷಗಳನ್ನು ದೂರ ಮಾಡಿ, ಇಡೀ ಜನಾಂಗಕ್ಕೆ ಅವನು ಆದರ್ಶಪ್ರಾಯನಾಗಿದ್ದಾನೆಂಬುದನ್ನು ಸಿದ್ಧಾಂತಮಾಡಿ ತೋರಿಸಿದ್ದಾನೆ. ಮಾನವರಾದ ನಾವು ಈ ದೃಷ್ಟಿಯಿಂದ ಶ್ರೀರಾಮ ಚರಿತೆಯನ್ನು ಓದಿ ತಿಳಿಯಬೇಕು. ಹೀಗೆ ಮಾಡಿದರೆ ನಮ್ಮ ದೃಷ್ಟಿ ವಿಶಾಲವಾಗುವುದು. ನಡತೆ ಸ್ವಚ್ಛವಾಗುವುದು. ಸನ್ಮಾರ್ಗದಲ್ಲಿ ನಡೆಯುವ ಅವಕಾಶ ದೊರೆಯುವುದು.

ಮಾನವ ಜೀವನ ಒಂದು ನಾಟಕ, ಇದರಲ್ಲಿ ನಡೆಯುವ ಪ್ರತಿಯೊಂದು ಅಂಶವೂ ಸತ್ಯವಾಗಿ ನಿರೂಪಿತವಾಗಬೇಕು. ನಡೆದುದೆಲ್ಲವೂ, ನಡೆದಂತೆ, ಉತ್ಪ್ರೇಕ್ಷೆಯಿಲ್ಲದೆ ನಿರೂಪಿತವಾಗಬೇಕು. ಹಾಗೆ ಮಾಡದೆ ಮಾನವ ಜೀವನ ಅವನವನ ಅದೃಷ್ಟವನ್ನು ಅವಲಂಬಿಸಿದೆ, ಅವನು ಸೂತ್ರದ ಬೊಂಬೆ. ಸೂತ್ರ ಹಿಡಿದು ಆಡಿಸಿದಂತೆ ಮಾನವನು ಆಡುವನು. ಎಲ್ಲವೂ ದೇವರ ಇಷ್ಟಪ್ರಕಾರ ನಡೆಯುವುದು, ಎಂದು ತಿಳಿದು ತಟಸ್ಥನಾಗುವುದಲ್ಲ, ಏಕೆಂದರೆ ಆಗ ಜೀವನದಲ್ಲಿ ಕಂಡುಬರುವ ಆಸೆ–ಆಕಾಂಕ್ಷೆ, ನಿರೀಕ್ಷೆ, ಸುಖ–ಶಾಂತಿ ಎಲ್ಲಕ್ಕೂ ಅರ್ಥವಿಲ್ಲದಂತಾಗುವುದು, ಜೀವನದ ನೈತಿಕ, ಧಾರ್ಮಿಕ ಮೌಲ್ಯವು ಮುಖ್ಯವಾಗಿ ಎರಡು ವಿಷಯಗಳನ್ನು ಅವಲಂಬಿಸಿದೆ. ಒಂದು, ಜೀವನದಲ್ಲಿ ಒದಗುವ ಸ್ವಾರ್ಥತ್ಯಾಗಪೂರಿತ ಕಾರ್ಯಗಳನ್ನೊಳಗೊಂಡ ಸಮಸ್ಯೆಗಳು ಸತ್ಯವಾಗಿ ನಿರೂಪಿತವಾಗಬೇಕು. ಇನ್ನೊಂದು, ವ್ಯಕ್ತಿಜೀವನದಲ್ಲಿ ನಡೆಯು ಧಾರ್ಮಿಕ, ನೈತಿಕ ಹವ್ಯಾಸಗಳೆಲ್ಲ ಸಹಜರೀತಿಯಲ್ಲಿ ನಮೂದಿಸಲ್ಪಡಬೇಕು. ಪ್ರತಿ ಸಂದರ್ಭವೂ ಹೇಗೆ ನಡೆಯಿತೋ ಹಾಗೆ ಸೂಚಿಸಲ್ಪಡಬೇಕು. ಈ ನಿಯಮಗಳೆಲ್ಲವೂ ಶ್ರೀಮದ್ರಾಮಾಯಣದಲ್ಲಿ ಶ್ರೇಷ್ಠರೀತಿಯಲ್ಲಿ ಪರಿಪಾಲಿತವಾಗಿವೆ.

ಮಾನವರಲ್ಲಿ ಮೇಲು ಕೀಳು ಭಾವನೆ ತುಂಬಿಕೊಂಡಿವೆ. ದುಃಖ, ಕೋಪ, ಸಂಕಟ, ನಿರಾಸೆ, ಅನುಮಾನ ಉಂಟಾದಾಗ ಸಾಮಾನ್ಯ ಮಾನವರು, ಕೀಳು ಸ್ವಭಾವವನ್ನು ವ್ಯಕ್ತಪಡಿಸುತ್ತಾರೆ, ಇಂತಹ ಅನೇಕ ಸಂದರ್ಭಗಳನ್ನು ನಿತ್ಯವೂ ಕಾಣಬಹುದು. ಇಂತಹ ಸಂದರ್ಭಗಳಿಂದ ಉಂಟಾಗುವ ಕೆಟ್ಟ ಪರಿಣಾಮಗಳಿಗೆ ಅವರು ಭಾಗಿಗಳಾಗಿ ಹೆಚ್ಚು ಕಷ್ಟನಷ್ಟ ಅನುಭವಿಸುವ ಅವಕಾಶಗಳೂ ಹೇರಳವಾಗಿವೆ. ಆದರೆ ಶ್ರೀರಾಮನು ಎಂತಹ ಕಠಿಣ ಸಂದರ್ಭದಲ್ಲಿಯೂ, ಕೀಳು ಭಾವನೆಯನ್ನು ವ್ಯಕ್ತಪಡಿಸಿಲ್ಲ. ಹಾಗೆ ಆರೋಪಿಸುವುದೂ ಕೂಡ ಸರಿಯಲ್ಲ. ಶ್ರೀರಾಮನು, ಕಾಯಾ, ವಾಚಾ, ಮನಸಾ, ಮಾನವಸಹಜ ಗುಣವನ್ನು ವ್ಯಕ್ತಪಡಿಸಿದ್ದರೂ, ಸಾಮಾನ್ಯಮಾನವನಂತೆ, ಅತ್ತು, ಕೋಪಗೊಂಡು, ಅನುಮಾನಪಟ್ಟು, ಆಸೆ–ಆಕಾಂಕ್ಷೆಗಳನ್ನು ತೋರಿಸಿದ್ದರೂ, ಅಂತಹ ಸಂದರ್ಭಗಳಲ್ಲಿ ಅವನು ಸರ್ವೋತ್ತಮರೀತಿಯಲ್ಲಿ, ಆದರ್ಶರೀತಿಯಲ್ಲಿ ವರ್ತಿಸಿದ್ದಾನೆ. ಇದರಿಂದ ಅವನ ವಿಷಯದಲ್ಲಿ ನಮ್ಮ ಮೆಚ್ಚಿಗೆ ಹೆಚ್ಚಿದೆ. ನಮ್ಮ ಗೌರವ ಅವನ ವಿಷಯದಲ್ಲಿ ಇಮ್ಮಡಿಯಾಗಿದೆ. ನಮ್ಮ ವಿಶ್ವಾಸ, ಅಭಿಮಾನ ವೃದ್ಧಿಯಾಗಿದೆ. ಹೀಗೆ ಶ್ರೀರಾಮನು, ಎಲ್ಲಕಾಲಕ್ಕೂ, ಎಲ್ಲ ಜನರಿಗೂ ಉದಾರಚರಿತನಾಗಿದ್ದಾನೆ. ಆದುದರಿಂದ ಮಾನವರಾದ ನಾವು ಶ್ರೀರಾಮನನ್ನು ಮಾರ್ಗದರ್ಶಕ, ಉಪದೇಶಕ ಎಂದು ಗೌರವಿಸಬೇಕು, ಆದರ್ಶ ಮಹಾಪುರುಷ ಎಂದು ತಿಳಿಯಬೇಕು.

ಶ್ರೀರಾಮನು ನುಡಿದ ಪ್ರತಿಯೊಂದು ಮಾತೂ ನಡೆಸಿದ ಪ್ರತಿಯೊಂದು ಕಾರ್ಯವೂ, ಅನುಭವಿಸಿದ

ಕಷ್ಟಕಾರ್ಪಣ್ಯಗಳೆಲ್ಲವೂ, ಮಾನವನಿಗೆ ಸರಿ ಹೊಂದತಕ್ಕವು. ಮಾನವಾತೀತ ವಿಷಯಗಳು ಅನ್ನಾಗಿ ಪ್ರದರ್ಶನವಾಗಿಲ್ಲ. ಸದ್ಗುಣಗಳನ್ನು ಹೊಂದಿ ಧರ್ಮಗಳನ್ನು ಆಚರಿಸಿ, ಸತ್ಪಾತ್ರವು ಶತ್ರುಗಳನ್ನು ಗುಣಗಳನ್ನೂ ಶ್ರೀರಾಮನು ಆದರ್ಶ ರೀತಿಯಲ್ಲಿ ತೋರಿಸಿದ್ದಾನೆ, ಈ ದೃಷ್ಟಿಯಿಂದ ವಾಲ್ಮೀಕಿಯ ಶ್ರೀರಾಮ ಚರಿತೆಯನ್ನು ಓದುವುದು, ಅಲ್ಲಿನ ನಾಟಕ್ಕಾಗಿ ವಿಷಯಗಳನ್ನು ಮನನ ಮಾಡಿ ಆಚರಿಸುವುದು, ಸಹಜವಾಗಿ ಕಾಡುತ್ತವೆ.

ಶ್ರೀರಾಮನು ಮಾತಾಪಿತೃಗಳ ಆಶ್ರಯದಲ್ಲಿ ಬೆಳೆದು, ಉತ್ತಮರಾದ ಗುರುಗಳಲ್ಲಿ ವಿದ್ಯಾಭ್ಯಾಸ ಪಡೆದು, ಸಂಸಾರದ ವಿಷಯಗಳನ್ನು ಎದುರಿಸಿದ್ದಾನೆ. ಸಾಮಾನ್ಯಮಾನವನಂತೆ ಅವನು, ದುಃಖಪಟ್ಟು ಅತ್ತಿದ್ದಾನೆ. ಕೋಪಗೊಂಡಿದ್ದಾನೆ. ಕಠಿಣಮಾತುಗಳನ್ನು ಹೇಳಿದ್ದಾನೆ. ಆದರೆ ಮಾನವನಿಗೆ ಬರುವ ಸಹಜ ದೋಷಗಳನ್ನು ದಾಟಿ ಮುಕ್ತನಾಗಿದ್ದಾನೆ. ಆದರ್ಶ ವ್ಯಕ್ತಿಯಾಗಿದ್ದಾನೆ. ಮಾನವರ ಮಧ್ಯೆ ಶ್ರೀರಾಮನು ಇದ್ದು ಮಾನವರಂತೆ ವರ್ತಿಸಿ, ಮಾನವ ಸಹಜವಾದ ದೌರ್ಬಲ್ಯ, ಚಾಪಲ್ಯಗಳನ್ನು ಉತ್ತಮರೀತಿಯಲ್ಲಿ ಜಯಿಸಿ, ಮಾನವ ವರ್ಗಕ್ಕೆ ಆದರ್ಶಪುರುಷನಾಗಿದ್ದಾನೆ.

ಶ್ರೀರಾಮನು ಆದರ್ಶಪುತ್ರ. ಪಿತೃವಾಕ್ಯ ಪರಿಪಾಲನೆ ಶ್ರೇಷ್ಠಕರ್ತವ್ಯವೆಂದು ತಿಳಿದು ಹದಿನಾಲ್ಕು ವರ್ಷ ವನವಾಸವನ್ನು ಕೈಗೊಂಡನು. ಆದರ್ಶ ಸಹೋದರ ಭರತನಲ್ಲಿ ಅವನಿಗಿದ್ದ ಪ್ರೀತಿ ವಿಶ್ವಾಸ ಅಸದೃಶ ರೀತಿಯದಾಗಿತ್ತು. ಲಕ್ಷ್ಮಣನು ಮೂರ್ಛೆ ಹೊಂದಿದಾಗ ಅವನು ನುಡಿದ ಮಾತುಗಳು ಪವಿತ್ರವಾಗಿದ್ದುವು. ಇಂತಹ ಸಹೋದರ ವಾತ್ಸಲ್ಯ, ಜಗತ್ತಿನಲ್ಲಿ ಯಾರೂ ತೋರಿಸಿಲ್ಲವೆಂದೇ ಹೇಳಬಹುದು. ಹಾಗೆಯೇ ಪತ್ನಿಗಾಗಿ ಅವನು ತೋರಿಸಿದ ಪ್ರೇಮ ಮತ್ತು ಪರಾಕ್ರಮ ಅನುಪಮ ರೀತಿಯದು. ಹೀಗೆ ಆದರ್ಶ ಪತಿಯಾಗಿರಲು ಇನ್ನಾರಿಗೆ ತಾನೆ ಸಾಧ್ಯ? ಎಲ್ಲಕ್ಕಿಂತ ಮೇಲಾಗಿ ಅವನು ಆದರ್ಶಮಿತ್ರ. ಸುಗ್ರೀವನನ್ನು ಪರಮಮಿತ್ರನನ್ನಾಗಿ ಸ್ವೀಕರಿಸಿ, ಅವನಲ್ಲಿ ವರ್ತಿಸಿದ ರೀತಿ ಸರ್ವಸಮರ್ಪಕ ರೀತಿಯದಾಗಿತ್ತು. ಆಂಜನೇಯನನ್ನು ನೋಡಿದಕೂಡಲೇ, ಅವನು ಮಹಾತ್ಮನೆಂದೂ, ಮಹಾಬುದ್ಧಿವಂತನೆಂದೂ ಲಕ್ಷ್ಮಣನಿಗೆ ಹೇಳುವನು. ಸುಗ್ರೀವನನ್ನು ಕಂಡ ಲಕ್ಷ್ಮಣ ಅವನು ಧೂರ್ತನಲ್ಲವೆಂದು ತಿರಸ್ಕರಿಸುವನು. ವಿಭೀಷಣನ ಆರ್ತಧ್ವನಿಯನ್ನು ಕೇಳಿದ ತಕ್ಷಣ ಅವನಿಗೆ ರಕ್ಷಣೆಯನ್ನು ನೀಡುವನು. ಇಂತಹ ಅಭಯ ನೀಡುವುದೇ ತನ್ನ ವ್ರತವೆಂದು ತಿಳಿಸುವನು.

ಶ್ರೀರಾಮನು ಭರತ, ಲಕ್ಷ್ಮಣ, ಶತ್ರುಘ್ನರಿಗಿಂತ ಅರ್ಧದಿನಮಾತ್ರ ಹಿರಿಯವನು. ಆದರೂ ಸಮ್ಮಂದಿರು ವರ್ಷಾಂತರ ಚಿಕ್ಕವರೆಂದು ಭಾವಿಸಿದ್ದಾನೆ. ನೋಡುವವರೂ ಕೂಡ ಶ್ರೀರಾಮನು ಹಿರಿಯವನೆಂದು ಗೌರವಿಸುತ್ತಾರೆ. ಭರತನನ್ನು ಚಿತ್ರಕೂಟದಲ್ಲಿ ತನ್ನ ತೊಡೆಯಮೇಲೆ ಕೂರಿಸಿಕೊಂಡು ಅನೇಕ ನೀತಿವಾಕ್ಯಗಳನ್ನು ಹೇಳುವನು. ವನವಾಸದಲ್ಲಿ ಶ್ರೀರಾಮನು ಎಂದೂ ಅಸುಖಿಯಾಗಿದ್ದಂತೆ ಕಾಣುವುದಿಲ್ಲ. ಅಯೋಧ್ಯೆಯಲ್ಲಿ ಅವನು ಪ್ರೇಮವರಿತು ವರ್ತಿಸಿದವನೇ ಅಲ್ಲ. ಪ್ರಜೆಗಳಿಗೆ ಶ್ರೀರಾಮನಲ್ಲಿ ವಿಶೇಷ ಗೌರವ. ಅವನು ದೇವನೆಂದೇ ಅವರು ವಿಶ್ವಾಸ ಗೌರವ ತೋರಿಸುತ್ತಿದ್ದರು.

ಶರಣು ಎಂದು ಹೇಳಿದ ವಿಭೀಷಣನನ್ನು ತಕ್ಷಣ ರಕ್ಷಿಸುತ್ತೇನೆಂದು ಹೇಳಿದ ಶ್ರೀರಾಮನ ವಾಕ್ಯ ಅವನ ಆದರ್ಶಪುರುಷತ್ವವನ್ನು ಸ್ಪಷ್ಟಪಡಿಸುತ್ತದೆ. ಶ್ರೀರಾಮನು ಎಲ್ಲ ವಿಧದಲ್ಲಿಯೂ ಆದರ್ಶ ಪುರುಷ. ಅವನ ಆದರ್ಶದ ಮಟ್ಟಕ್ಕೆ ಇನ್ನಾರೂ ಇಲ್ಲ. ಹಾಗಿರುವುದಾದರೆ ಪರಮಾತ್ಮನೊಬ್ಬನೇ ಎಂದು ಕಾಣುತ್ತದೆ. ದೇವರನ್ನು ಕಂಡವರು ದೊರಕುವುದು ದುರ್ಲಭ; ಆದರೆ, ದೇವರನ್ನು ಮತ್ತು ಅವನ ಕಲ್ಯಾಣ ಗುಣಗಳನ್ನು ಮಾನವರು ತಿಳಿಯಬೇಕಾದರೆ, ಶ್ರೀರಾಮನಂತಹ ಆದರ್ಶಪುರುಷನ ಗುಣಗಳನ್ನು ಮನನ ಮಾಡಬೇಕು.

ಶ್ರೀರಾಮನು ವ್ಯಕ್ತಪಡಿಸಿದ ಮತ್ತೊಂದು ಮಹತ್ವದಗುಣ ಎಂದರೆ ಸ್ಥಿತಪ್ರಜ್ಞೆಯ ಲಕ್ಷಣ. ಲೋಕದೊಡನೆ ನೈಜವಾದ ಸಂಪರ್ಕ ಹೊಂದಿ, ಕರ್ತವ್ಯ ಪರಾಕಾಷ್ಠೆಯನ್ನು ಪ್ರಕಾಶಪಡಿಸುತ್ತಿದ್ದನು. ಅವರ ಸುಖ ದುಃಖಗಳ ಮತ್ತು ಇಷ್ಟಾನಿಷ್ಟಗಳ ದ್ವಂದ್ವದಿಂದ ಹೊರತಾಗಿ ನಿಂತ ಮಹಾಪುರುಷ ಇವನು. ಯುವರಾಜಪಟ್ಟಾಭಿಷೇಕದ ಸಂತೋಷ, ಅದರ ಭಗ್ನತೆ ಅನುತಾಪ, ವನವಾಸದ ಕಷ್ಟ, ಸೀತಾವಿಯೋಗದ ಸಂತಾಪ, ಸೀತಾಪರಿಗ್ರಹದ ಆನಂದ ಮತ್ತು ಸೀತಾಪರಿತ್ಯಾಗದ ದಾರುಣ ದುಃಖ ಸೋದರರೊಡನೆ ಸೇರಿದ ಸುಖ– ಇತ್ಯಾದಿ ಎಲ್ಲ ಅನುಭವಗಳಲ್ಲಿ, ತಾತ್ಕಾಲಿಕವಾಗಿ ಮಾನವಸಹಜ ಭಾವೋದ್ರೇಕಗಳನ್ನು ಪ್ರಕಟಿಸಿದರೂ, ಅವಾವೂ ಅವನನ್ನು ಬಂಧಿಸಲಿಲ್ಲ. ಕರ್ತವ್ಯ ವಿಮುಖನಾಗುವಂತೆ ಮಾಡಲಿಲ್ಲ, ಭಾವೋದ್ರೇಕದಿಂದ ಹೊರಬಂದು ನಿರ್ಮೋಹಕ ನಿರ್ಮಲ ಚಿತ್ತನಾಗಿ, ಲೋಕೋತ್ತರವಾದ ಆದರ್ಶ ಪುರುಷತ್ವವನ್ನು ಅನುಗ್ರಹಿಸಿದ್ದಾನೆ.

ಶ್ರೀರಾಮನ ಗುಣ ಕಥನಕ್ಕೆ ಮಿತಿಯಿಲ್ಲ. ಅವನ ಜನಕಲ್ಯಾಣ ಪರಿಪೂರ್ಣ ಅಂಶಗಳು ನಮ್ಮ ಮನಸ್ಸಿನ ಕಲ್ಪನೆಗೂ ಅತೀತ. ಅವುಗಳ ವರ್ಣನೆಗೆ ಇತಿಮಿತಿಗಳ ಎಲ್ಲೆಯೇ ಇಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ವಿಶ್ವದ ಪ್ರತಿ ಮಾನವನೂ ಅವನ ಆದರ್ಶವನ್ನು ಅನುಕರಿಸಬಹುದು. ಅನುಕರಿಸಬೇಕು. ಅದೇ ಧರ್ಮ, ಅದೇ ವ್ಯವಹಾರ, ಅದೇ ಬಾಳಿನ ಭವ್ಯಸಂಪತ್ತು. ಇಂತಹ ಪಾತ್ರ ಸೃಷ್ಟಿಮಾಡಿ, ನಿರೂಪಣೆಮಾಡಿರುವ ಆದಿಕವಿಗೆ ಇಡೀ ಜಗತ್ತು ಕೃತಜ್ಞತೆ ಅರ್ಪಿಸಬೇಕು.

ಶ್ರೀಮದ್ರಾಮಾಯಣವು ಶ್ರೀರಾಮನ ಮಹತ್ವಪೂರಿತ ಕಥೆ, ನೀತಿಪ್ರಧಾನವಾದ ಕಥೆ, ಇದನ್ನು ಓದಿ, ಓದಿಸಿಕೇಳಿ ಅನುಸಂಧಾನಮಾಡಿದರೆ, ಜನಜೀವನದ ಸಂಪತ್ತು ವೃದ್ಧಿಯಾಗುವುದು, ಜನರ ಪ್ರತಿಭೆ ಹೆಚ್ಚುವುದು. ಅವರ ಸಂಸ್ಕೃತಿಗೆ ಮೆರಗು ಕೊಟ್ಟಂತಾಗುವುದು. ಅವರ ಭಾವೀ ಜೀವನ ಸುಂದರವಾಗುವುದು. ಹೀಗೆ ಈ ಆದರ್ಶ ಮಹಾಪುರುಷನ ಕಥೆ ಜನಜೀವನದ ಸಾಹಿತ್ಯ ಭಂಡಾರ. ಬಂಗಾರದ ಗಣಿ. ಅದರ ಅಮರ ಸಂದೇಶಗಳನ್ನು ಆಚರಣೆಯಲ್ಲಿ ತಂದರೆ, ಜನ ಜೀವನ, ಜಗತ್ತು ಎಲ್ಲವೂ ಸಾರ್ಥಕ್ಯವನ್ನೂ ಸುಖವನ್ನೂ ಪಡೆಯುವುದು.

ರಾಮ ರಾಮನೆಂದವನು ಸ್ವರ್ಗದ
ಕಾಮಿನೀಜನಕೊಡೆಯ ಸಹ, ರಘು
ರಾಮ ರಕ್ಷಿಸು ರಕ್ಷಿಸೆಂದವ ಕಮಲಭವನಹನು ।
ರಾಮ ಚರಿತಾಮೃತವ ಕೇಳ ವ
ರಾಮನಿಗೆ ಸರಿಯಹನು ಜಗದೊಳು
ರಾಮನಾಮಕ ಸರಿಯ ಕಾಣೆನು ಎಂದು
ಮುನಿನುಡಿದ ॥

---

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

## ಗೀತಾ ಜಯಂತಿ

[illegible] ಅಂತಹ ರಾಷ್ಟ್ರದ [illegible] ಸಂದೇಹವಿಲ್ಲ.

ಗೀತೆ ನವ ಯುವಕರನ್ನು ಸಂಬೋಧಿಸುತ್ತದೆ. ಅವರ ಹೇಳಲಶಕ್ಯವಾದಂತಹ ಅಶಾಂತಿ, ಪೂರೈಸಲಾಗದಂತಹ ಹೀಯಾಸೆಗಳು, ತೀರದ ಬಯಕೆಗಳು, ಮೋಹಾತಿರೇಕಗಳು, ದುಃಖಗಳು, ಧ್ವಂಸಕ್ಕೀಡು ಮಾಡುವಂತಹ ಗಾಬರಿ, ಗೊಂದಲಗಳು ಅಷ್ಟೇಕೆ ಜೀವನ ರಂಗದಲ್ಲಿ ತಮ್ಮನ್ನೇ ತಾವು ಮೋಸ ಮಾಡಿಕೊಳ್ಳುವಂತಹ ಬುದ್ಧಿ ಇವೇ ಮೊದಲಾದ ಮಾನಸಿಕ ಗಡಿಬಿಡಿಗಳೆಲ್ಲವೂ ಅರ್ಜುನನಲ್ಲಿ ಚಿತ್ರಿತವಾಗಿವೆ. ಪಾಂಡವ ರಾಜ ಕುಮಾರನಿಗೆ ಶ್ರೀ ಕೃಷ್ಣನು ಮಾಡಿದ ಮಾನಸಿಕ ಚಿಕಿತ್ಸೆಯೇ ಭಗವದ್ಗೀತೆಯ ಪ್ರಮುಖವಾದ ವಿಷಯ.

[illegible] ನಾವು ನಮ್ಮ ಪ್ರಗತಿಗಾಗಿ, ನಮ್ಮನ್ನು ಬಲ ಪಡಿಸಿಕೊಳ್ಳಲಿಕ್ಕಾಗಿ ಮತ್ತು ರಾಷ್ಟ್ರದ ಪುನರ್‌ನಿರ್ಮಾಣದಲ್ಲಿ ಎದುರಾಗುವ ಈ ರೀತಿಯ ಸ್ವಾಭಾವಿಕ ದ್ವಂದ್ವ ಆಹ್ವಾನಗಳನ್ನು ಎದುರಿಸಲು ಅಗತ್ಯವಾದ ಶಕ್ತಿ ಸಾಮರ್ಥ್ಯವನ್ನು ಮತ್ತು ಸಹನ ಶೀಲತೆಯನ್ನು ಸಂಪಾದಿಸಿಕೊಳ್ಳಬೇಕಾಗಿದೆ. ಪ್ರತಿಯೊಬ್ಬ ಪ್ರಜೆಯಲ್ಲಿಯೂ ಧೈರ್ಯ ತಾಳ್ಮೆ ಮತ್ತು ವೀರ್ಯ ಇವೆಲ್ಲವೂ ಸಾಕಷ್ಟಿವೆ. ಆದರೆ ಇಂತಹ ಅಮೂಲ್ಯ ಶಕ್ತಿಗಳು ಇದೀಗ ಸುಪ್ತ ಸ್ಥಿತಿಯಲ್ಲಿವೆ. ಇವುಗಳನ್ನು ಬಡಿದೆಬ್ಬಿಸಬೇಕಾಗಿದೆ. ಇದಕ್ಕಾಗಿ ನಮ್ಮ ಸಾಂಸ್ಕೃತಿಕ ಪ್ರತಿಭೆಯು ಕಡೆಗೆ ದೃಷ್ಟಿ ಹರಿಸಬೇಕಾಗುವುದು.

ಇಂದು ನಾವು ನಿಸ್ಸಂದೇಹವಾಗಿಯೂ ಒಂದು ಯೋಗ್ಯ ರಾಷ್ಟ್ರವಾಗಿದ್ದೇವೆ ನಿಜ. ಆದರೆ ಇಲ್ಲಿ [illegible]

ಕೆಂದಾಗಿ ಮತ್ತು ಸ್ವ ರಚಿತವಾದ ಕಷ್ಟ ಕಾರ್ಪಣ್ಯಗಳ ಆಸೆಯಿಂದ [illegible]

[illegible]

## ರಾಷ್ಟ್ರನಿರ್ಮಾಣ ಹಾಗೂ ಭಗವದ್ಗೀತೆ

ಈ ವ್ಯಕ್ತಿತ್ವ ಪುನರ್‌ಸಂಘಟನೆಯ ರಹಸ್ಯವೇ ಭಗವದ್ಗೀತೆಯ ತಿರುಳು. ನಮ್ಮ ರಾಷ್ಟ್ರದ ಪುನರುತ್ಥಾನದ ಕಾರ್ಯದಲ್ಲಿ ಕೂಡ ಈ ಮಹಾನ್ ರಹಸ್ಯಮಯ ತತ್ತ್ವಕ್ಕಿಂತ ಹೆಚ್ಚಿನ ಬೇರೆ ಯಾವ ಜ್ಞಾನದ ಅವಶ್ಯಕತೆ ಇಲ್ಲ. ಆದುದರಿಂದ ಗೀತೆಯು ರಾಷ್ಟ್ರದ ಯುವ ಜನಾಂಗಕ್ಕಾಗಿ ಹೇಳಿರುವ ಶಾಸ್ತ್ರ ಎಂಬುದನ್ನು ನಾನು ಇಲ್ಲಿ ಒತ್ತಿ ಹೇಳುತ್ತೇನೆ.

ಚುಟುಕಾಗಿ ಹೇಳುವುದಾದರೆ, ಇಂತಹ ಭಯಾನಕ ಕಣದಲ್ಲಿ ಯಾವಾಗ ಮನುಷ್ಯನು ತನ್ನ ವಿವೇಕ ಶಕ್ತಿಯನ್ನು ಕಳೆದು ಕೊಳ್ಳುತ್ತಾನೆಯೋ ಆಗ ಅವನು ಪ್ರಾಪಂಚಿಕ ಸಮಸ್ಯೆಗ

ವುದರಿಂದ ನಮಗೂ ಕೂಡ ಸಾಮಾಜಿಕ ದೃಷ್ಟಿಯಿಂದ ರಚನಾತ್ಮಕ ಮನುಷ್ಯರಾಗಲು ಸಾಧ್ಯವಿದೆ ಮತ್ತು ವ್ಯಕ್ತಿಗತ ರೂಪದಲ್ಲಿ ಅಧಿಕ ಸಮತ್ವ ಮತ್ತು ಸಂತುಷ್ಟಿಯನ್ನು ಪ್ರಾಪ್ತಿ ಮಾಡಿಕೊಳ್ಳುವುದರ ಮೂಲಕ ಶಾಂತ ಜೀವನವನ್ನು ನಡೆಸಲು ಸಾಧ್ಯವಿದೆ.

ಯಾವ ವ್ಯಕ್ತಿಯಲ್ಲಿ ಆಂತರಿಕ ಸಮತೆ ಇಲ್ಲವೋ ಮತ್ತು ಯಾರು ಬಾಹ್ಯ ಪ್ರಪಂಚದಲ್ಲಿ ಕ್ರಿಯಾತ್ಮಕವಾಗಿ ಕಾರ್ಯ ಪ್ರವೃತ್ತರಾಗಲು ಕೂಡ ಶಕ್ತರಾಗಿಲ್ಲವೋ, ಎಂಥವರು ಜೀವನದಲ್ಲಿ ತನ್ನ ಸಮಸ್ಯೆಗಳನ್ನು ಎದುರಿಸುವಲ್ಲಿ ಅಸಮರ್ಥರಾಗಿದ್ದಾರೋ, ಅಂತಹ ವ್ಯಕ್ತಿಗಳಿಂದಲೇ ರಚನಾ

ರಾಷ್ಟ್ರಪಿತ ಗಾಂಧೀಜಿಯವರಿಗೆ ಭಗವದ್ಗೀತೆ ಅನಾಸಕ್ತಿಯೋಗವಾಗಿ ತಾಯಿಯು ನೀಡುವ ಸಾಂತ್ವನ, ಅಕ್ಕರೆ ಮತ್ತು ನೆಮ್ಮದಿ ನೀಡಿತ್ತು. ಅವರು ಗೀತೆಯ ವ್ಯಾಸಂಗ ಮಾಡಿದ್ದು ಉನ್ನತ ವ್ಯಾಸಂಗಕ್ಕೆ ವಿಶೇಷಕ್ಕೆ ಕೆರಳಿದ್ದಾಗ. ನಾವು ಮಾಡುವ ಕಲಸದ ಗುಟ್ಟನ್ನು ಹೇಳಿಕೊಟ್ಟು ಸುಲಭ ಶೈಲಿಯಲ್ಲಿ ಜೀವನ ವಿವರಿಸುವುದೇ ಅನಾಸಕ್ತಿಯೋಗ. ಪೂಜ್ಯ ಶ್ರೀ ವಿಶ್ವೇಶತೀರ್ಥ ಪಾದಂಗಳವರು ಅಪ್ಪಣೆ ಕೊಡಿಸಿರುವಂತೆ ಭಗವದ್ಗೀತೆ ಭಾರತೀಯರ ಶ್ರೇಷ್ಠ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಗ್ರಂಥವಾಗಿದೆ. ಇಂದಿನ ಯುವ ಜನತೆಯು ನಿತ್ಯಜೀವನ ನೀತಿ ಧರ್ಮಗಳ ಹಿನ್ನೆಲೆಯಲ್ಲಿ ಬೆಳೆದು ಭಾರತದ ಶ್ರೇಷ್ಠ ನಾಗರಿಕರಾಗಿ ಬಾಳಲು ವಿದ್ಯಾರ್ಥಿ ಜೀವನವೇ ಮಂಗಳಕರ ಬುನಾದಿಯಾಗಿದೆ. ಅದ್ದರಿಂದಲೇ ಗೀತಾಧ್ಯಯನ ಈ ದೆಸೆಯಲ್ಲಿ ಅವಶ್ಯ. ಗೀತಾಜಯಂತಿಯ ಈ ತಿಂಗಳಲ್ಲಿ ಸ್ವಾಮಿ ಚಿನ್ಮಯಾನಂದರ ಹಲವು ವಿಚಾರಗಳು ಇಲ್ಲಿ ಸಂಗ್ರಹಿತವಾಗಿವೆ.



ಗಿರುವ ಸಮಾಜವಾದರೂ ಸಹ ತನ್ನ ಅಥವಾ ರಾಷ್ಟ್ರದ ಸಮಸ್ಯೆಗಳನ್ನು ಎದುರಿಸುವಲ್ಲಿ ಅಸಮರ್ಥವಾಗುವುದು ಖಂಡಿತ.

ಪ್ರಾಮಾಣಿಕ ಸಾಧಕನಂತೆ ನಾವು ಕೂಡ ಗೀತೆಯು ಜೀವನ ಪದ್ಧತಿಯಲ್ಲಿ ತಿಳಿದುಕೊಳ್ಳುವಂತಹ ವಿಷಯ ಏನಾದರೂ ಇದೆಯೇ ಎಂಬುದನ್ನು ನೋಡೋಣ. ನಾವು ಸ್ವತಂತ್ರ ರೂಪದಲ್ಲಿ ಗ್ರಂಥದ ಅಧ್ಯಯನ ಮಾಡೋಣ, ಅದರ ಕುರಿತಾಗಿ ಬೇರೆಯವರು ಏನೆಲ್ಲವನ್ನೂ ಹೇಳಿದ್ದಾರೆಯೋ ಅವನ್ನು ಕಣ್ಣು ಮುಚ್ಚಿ ಅನುಸರಿಸದೆ ಅನನ್ಯ ಶ್ರದ್ಧೆಯಿಂದ ಅದರ ಸಹಜ, ವಿಮರ್ಶಾತ್ಮಕ ಮತ್ತು ಆಲೋಚನಾತ್ಮಕ ತತ್ತ್ವಗಳ ವಿವೇಚನೆ ಮಾಡೋಣ, ಅದರ ಕಡೆ ದೃಢವಾದ ವೈಜ್ಞಾನಿಕ ದೃಷ್ಟಿ ಕೋನದಿಂದ ನೋಡೋಣ. ಭಗವದ್ಗೀತೆಯು ಕುರಿತಾದ ಈ ಅಧ್ಯಯನದಲ್ಲಿ ಇದೇ ಪದ್ಧತಿಯನ್ನು ನಾವು ಅನುಕರಣೆ ಮಾಡೋಣ.

ಗೀತೆಯು ಜೀವನ ರಹಸ್ಯವನ್ನು ತಿಳಿಯಪಡಿಸುವ ಒಂದು ಅತ್ಯಂತ ಶ್ರೇಷ್ಠ ಗ್ರಂಥ. ನಮ್ಮಲ್ಲಿ ಕೆಲವರಾದರೂ ನಮ್ಮ ಮನೆಯ ಕಪಾಟಿನಲ್ಲಿ ಗೀತೆಯ ಒಂದು ಸುಂದರ ಪ್ರತಿಯನ್ನಂತೂ ಇಟ್ಟಿರುತ್ತಾರೆ. ಆದರೆ 'ಗೀತೆಯು ಒಂದು ಅದ್ಭುತವಾದ ಗ್ರಂಥವಾಗಿದೆ'. ಎಂದು ಇಷ್ಟುಮಾತ್ರ ತಿಳಿದು ಕೊಳ್ಳುವುದರಿಂದ ನಾವು ಸಾಮಾಜಿಕ ಅಥವ ಸಾಂಸ್ಕೃತಿಕ ರೂಪದಲ್ಲಿ ಅದರಿಂದ ಲಾಭಾನ್ವಿತರಾಗಲು ಸಾಧ್ಯವಿಲ್ಲ. ನಾವು ಗೀತೆಯಲ್ಲಿ ಚರ್ಚಿತ ಪ್ರತ್ಯೇಕ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳುವುದರ ಪ್ರಯತ್ನ ಮಾಡಬೇಕಾಗುವುದು ಈಗ ನಮಗೆ ಗ್ರಹಿಸಿಕೊಳ್ಳಲು ಕಷ್ಟವಾದುದನ್ನು ಮತ್ತು ಲಾಭದಾಯಕವಾಗಿ ಪ್ರಯೋಗದಲ್ಲಿ ತರಲು ಆಗದುದನ್ನು ಬಿಟ್ಟು ಗೀತಾವಾಚನ ಕಲೆಯನ್ನು ದೃಢತೆಯಿಂದ ಅಭ್ಯಾಸಮಾಡಬೇಕಾಗುವುದು ಮತ್ತು ಅದನ್ನು ನಮ್ಮ ದೈನಂದಿನ ಜೀವನದಲ್ಲಿ ವ್ಯವಹಾರದಲ್ಲಿ ತರಲು ಪ್ರಯತ್ನಿಸಬೇಕು. ಇಷ್ಟು ಮಾಡಿದರೆ ಮಾತ್ರ ನಮಗೆ ಗೀತೆಯ ಉಚ್ಚ ಸಿದ್ಧಾಂತಗಳ ಮತ್ತು ಗಹನವಾದ ಉಪದೇಶಗಳ ಸತ್ಯತೆಯ ಅರಿವಾಗುವುದು.

ಶ್ರೀ ಕೃಷ್ಣನು ಈ ಕೆಳಗಿನ ಶ್ಲೋಕಗಳಲ್ಲಿ ಅರ್ಜುನನ ಪ್ರಶ್ನೆಗಳಿಗೆ ಸೂಕ್ತ ರೀತಿಯಲ್ಲಿ ಉತ್ತರವೀಯುತ್ತಾನೆ.

ಪ್ರಜಹಾತಿ ಯದಾ ಕಾಮಾನ್
ಸರ್ವಾನ್‌ಪಾರ್ಥ ಮನೋಗತಾನ್ ।
ಆತ್ಮನ್ಯೇವಾತ್ಮನಾ ತುಷ್ಟಃ,
ಸ್ಥಿತಪ್ರಜ್ಞಸ್ತದೋಚ್ಯತೇ ॥

ಓ ಪಾರ್ಥ ಯಾವಾಗ ಒಬ್ಬ ವ್ಯಕ್ತಿಯು ತನ್ನ ಮನಸ್ಸಿನಿಂದ ಎಲ್ಲಾ ಕಾಮನೆಗಳನ್ನು ದೂರ ಮಾಡಿಬಿಡುತ್ತಾನೆಯೋ ಮತ್ತು ತನ್ನಲ್ಲೇ ತಾನು ತೃಪ್ತಿ ಪಟ್ಟು ಸಂತೋಷದಿಂದಿರುತ್ತಾನೋ ಆವಾಗ ಅವನು ಸಿದ್ಧಪುರುಷನೆನಿಸುವನು. ನಮ್ಮ ಅಂತರ್ಯದಲೆಲ್ಲ ಎಷ್ಟೋ ರೀತಿಯ ಬೇಡಿಕೆಗಳು ಇರುವುದರಿಂದ ನಾನಾ ರೀತಿಯ ಕಾಮನೆಗಳು ಉದ್ಭವಿಸುತ್ತವೆ. 'ನಾವು ಅಪೂರ್ಣರಿದ್ದೇವೆ. ನಮ್ಮದು ಸುಖಮಯ ಜೀವನವಲ್ಲ' ಎನ್ನುವಂತಹ ಭಾವನೆಯು ನಮ್ಮ ಪ್ರತಿಯೊಬ್ಬರಲ್ಲಿಯೂ ಇದೆ. ಇದು ಸ್ವಾಭಾವಿಕ. ಹಾಗಾಗಿ ನಾವು ಪರಿಪೂರ್ಣರಾಗಬೇಕು, ಎನ್ನುವಂತಹ ಬಯಕೆಯು ನಮ್ಮಲ್ಲಿರುವುದು ಸ್ವಾಭಾವಿಕವೇ. ಅಂತಾಗಿ ಈ ರೀತಿಯ ಜೀವನವನ್ನು ಸಾಧಿಸಲು ಅದಕ್ಕೆ ಅವಶ್ಯವಾದ ಪ್ರಯತ್ನಗಳನ್ನು ಮಾಡಲು ನಾವು ಉದ್ಯುಕ್ತರಾಗುತ್ತೇವೆ. ಹೀಗೆ ಪ್ರವೃತ್ತಿ ಮಾರ್ಗ ಪ್ರವರ್ತಕರಾಗಿ ವಸ್ತುಗಳನ್ನು ಪ್ರಾಪ್ತಿ ಮಾಡಿಕೊಳ್ಳುವುದರಿಂದ ನಮಗೆ ಪೂರ್ಣತ್ವವು ಲಭಿಸಬಹುದು. ಸಂತೃಪ್ತಿಯ ಜೀವನ ನಮ್ಮದಾಗಬಹುದು ಎಂಬ ಮಹದಭಿಲಾಷೆಯಿಂದ ಪ್ರಯತ್ನ ಶೀಲರಾಗುವುದಕ್ಕೆ 'ಕಾಮ' ಎಂದು ಹೆಸರು

ಬಯಕೆಗಳಿಂದ ಮುಕ್ತ ಅವಸ್ಥೆಯು, ಮನುಷ್ಯನು ಅಸಕ್ತನಾಗಿರುವ ಅಥವಾ ಅವನು ಜಾಡ್ಯಾವಸ್ಥೆಯಲ್ಲಿರುವಾಗ ಕೂಡಾ ಕಂಡುಬರಲು ಸಾಧ್ಯವಿದೆ. ಆದರೆ ಇದು ನಿಜವಾದ ವೈರಾಗ್ಯಭಾವವಲ್ಲ. ಅದು ಮೂರ್ಛಾಸ್ಥಿತಿ ಅಥವಾ ನಿದ್ರಾವಸ್ಥೆಯೂ ಆಗಿರಬಹುದು. ಯಾವಾಗ ಒಬ್ಬ ವ್ಯಕ್ತಿಯು ತನ್ನನ್ನು ತಾನು ತಿಳಿದು ಕೊಳ್ಳುತ್ತಾನೆಯೋ ಯಾವಾಗ ಅವನು ತನ್ನ ಅಂತರಾತ್ಮವಾದ ನಿತ್ಯ, ಶುದ್ಧ ಬುದ್ಧ ಮುಕ್ತ ಹಾಗೂ ಅನಂತ ಸ್ವರೂಪದ ಮಹಾನ್ ಚೈತನ್ಯದ ಬಗ್ಗೆ ತಿಳಿದುಕೊಂಡಿರುತ್ತಾನೋ, ಆವಾಗ ಅಂತಹವನಲ್ಲಿ ಕಂಡುಬರುವ ವೈರಾಗ್ಯವು ನಿಜವಾದುದು. ಅಂತಹ ಪರಮಪದವನ್ನು ಹೋಗಿ ಮುಟ್ಟಿದ ಮೇಲೆ ಅವನಿಗೆ ಬಯಕೆ, ಸುಖ, ದುಃಖ ಅಥವಾ ವ್ಯಥೆ ಎಂಬುದೇ ಇರದು. ಈ ವೈರಾಗ್ಯಭಾವನೆ ಸಿದ್ಧಪುರುಷನನ್ನು ಅಳೆಯುವ ಸಾಧನ ಅಥವಾ ಮಾನದಂಡ, ಬರೀ ವೈರಾಗ್ಯ ಭಾವವೇ ಒಬ್ಬನನ್ನು ಸಿದ್ಧಪುರುಷನನ್ನಾಗಿ ಮಾಡಲಾರದು. ವೈರಾಗ್ಯ ಭಾವವು ಆತ್ಮ ಸಾಕ್ಷಾತ್ಕಾರದ ಜೊತೆಗೆ ಕಂಡು ಬಂದರೆ ಮಾತ್ರ ಅದು ನಿಜವಾದ ವಿರಕ್ತ ಭಾವವು. ತನ್ನ ಅನಂತ ಶಕ್ತಿಯ ಬಗ್ಗೆ ಅರಿವಿರುವ ಸಿದ್ಧ ಪುರುಷನಲ್ಲಿ ಈ ಜಗತ್ತಿನ ವಿಷಯ ಪದಾರ್ಥಗಳ ಕಡೆಗೆ ವೈರಾಗ್ಯವೂ ಸ್ವಭಾವತಃ ಕಂಡುಬರುವುದು. ಅದು ನಿಜವಾಗಿ ಪರಿಪೂರ್ಣತೆಯ ಸ್ಥಿತಿ. ಅಷ್ಟೇ ಯಾಕೆ? ಅದುವೇ ನಿಜವಾದ ಜೀವನ ರೀತಿ.

ಸತ್ಯತೆಯಲ್ಲಿ ಅಂತಹ ವ್ಯಕ್ತಿಯು ತನಗೆ ತಾನೇ ಪ್ರಭು. ಅರ್ಥಾತ್ ಅವನು ಜಿತೇಂದ್ರಿಯ. ಬಡಿದಾಟ ನೂಕು ನುಗ್ಗಲಿನಿಂದ ಕೂಡಿದ ಈ ಪ್ರಪಂಚದಲ್ಲಿ ಕೂಡ ಅವನು ರಾಜನೇ. ಯಾವುದೇ ರೀತಿಯ ವಿಷಯ ಪದಾರ್ಥಗಳಿಂದ ಅವನು ಸೆಳೆಯಲ್ಪಡಲಾರ. ಹೀಗೆ ಸಿದ್ಧಪುರುಷನು ಬಾಹ್ಯ ಜಗತ್ತಿನ ದಬ್ಬಾಳಿಕೆ, ಹಾಗೂ ಕ್ರೂರತೆಗೆ ತಾನು ಸಿಕ್ಕಿ ಬೀಳುವುದಿಲ್ಲ. ಮಾತ್ರವಲ್ಲದೆ ತಾನಾಗಿ ಜಗತ್ತಿನಲ್ಲಿ ಕಷ್ಟ ಕಾರ್ಪಣ್ಯಗಳಿಗೆ ಕಾರಣನೂ ಆಗುವುದಿಲ್ಲ. ಅವನು ವಿಪತ್ತಿನ ಸಮಯದಲ್ಲೂ ಕೂಡಾ ತಟಸ್ಥನಾಗಿದ್ದು ಸ್ವಲ್ಪವೂ ವಿಚಲಿತನಾಗನು. ಸುಖ ಸಂತೋಷಗಳಲ್ಲಿ ಕೂಡ ಅತಿಯಾದ ಅನುರಾಗವಿರದೆ ದಮ ಮತ್ತು ಕ್ರೋಧಗಳಿಂದಲೂ ಬಹುದೂರ ಇರುವನು. ಹೀಗೆ ಈ ರೀತಿಯ ಲಕ್ಷಣಗಳುಳ್ಳವನು ಸಿದ್ಧಪುರುಷನೆನಿಸುವನು.

ಶುಭಾಶುಭಗಳು ಅರ್ಥಾತ್ ಕಷ್ಟ–ಸುಖಗಳು ಗುಂಪು ಗುಂಪಾಗಿ ಒಂದರ ಮೇಲೆ ಇನ್ನೊಂದರಂತೆ ಬರಬೇಕಾದರೆ ಬರಲಿ, ಸ್ಥಿತಪ್ರಜ್ಞನು ಅವುಗಳ ಬೆದರಿಕೆಗೆ ಬಲಿಯಾಗಲಾರ, ಧೈರ್ಯಗುಂದಲಾರ. ಏರು ಪೇರುಗಳಿಂದ ಕೂಡಿದ ಜೀವನವೇ ಅವನದಲ್ಲ, ನಗುಮೊಗದಿಂದ ಜೀವನವನ್ನು ಎದುರಿಸುತ್ತ ಸುಖ–ಶಾಂತಿಯಿಂದ ಜೀವಿಸುತ್ತಾನೆ. ಪೌರುಷದ ಮಹಾಗೋಪುರ ಅವನು. ಈ ಪ್ರಾಪಂಚಿಕ ಹೋರಾಟ ಮತ್ತು ವೇದನೆಗಳು, ಚೀರಾಟ ಹಾಗೂ ನೂಕು ನುಗ್ಗಾಟಗಳು, ಇವೆಲ್ಲವುಗಳಿಂದ ಬಹುದೂರವಿದ್ದು, ಅವುಗಳ ಪ್ರಭಾವಕ್ಕೊಳಗಾಗದೆ ತನ್ನಲ್ಲೇ ತಾನು ಆನಂದದಿಂದ ಸವಿಯುಣ್ಣುತ್ತ ಸಂತೃಪ್ತಿಯ ಭಾವದೊಂದಿಗೆ ಅವನು ನಮ್ಮೆಲ್ಲರ ಮಧ್ಯೆ ರಾರಾಜಿಸುತ್ತಿರುವನು ಜೀವನೆಂದರೆ ಅವನದು.

ಸಂಗ್ರಹ: **ಶ್ರೀ. ಸಿ. ಜಿ. ಸಿದ್ಧಯ್ಯ**
(ಆಧಾರ: ಸ್ವಾಮಿ ಚಿನ್ಮಯಾನಂದರು
–ಎದ್ದೇಳು ಭಾರತ)

(12ನೇ ಪುಟದಿಂದ)

ವನಿ ಶೂನ್ಯನಾಯ್ತು ದುಶ್ಶಾ
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ದಪೆಂ

ಈಗ ಆತನಿಗೆ ರಾಜ್ಯಕೋಶಾದಿಗಳಲ್ಲಿ ಆಸಕ್ತಿಯಿಲ್ಲ. ಏಕಾಂಗಿಯಾಗಿ ಪಾಂಡವರೊಡನೆ ಹೋರಾಡಿ, ತಾನೂ ತನ್ನನ್ನು ಅಗಲಿದವರೊಡನೆ ಸೇರಬೇಕೆಂಬ ತವಕವೇ ಹೆಚ್ಚಾಗಿದೆ. ಯುದ್ಧಭೂಮಿಯಲ್ಲಿ ಒಬ್ಬನೇ ಹೊರಟಿದ್ದಾನೆ. ರಣಭೂಮಿ ಹೆಣಮಯವಾಗಿದೆ. ರಕ್ತದ ಕೋಡಿ ಹರಿದು ಅಲ್ಲಲ್ಲಿ ಮಡುಗಟ್ಟಿದೆ. ಸತ್ತ ಕಳೇಬರಗಳಲ್ಲಿ ತನ್ನವರನ್ನು ಹುಡುಕುತ್ತಿದ್ದಾನೆ.

ಅಭಿಮನ್ಯುವಿನ ತರುವಾಯ ತನ್ನ ಮಗನಾದ ಲಕ್ಷಣಕುಮಾರನ ಸತ್ತ ದೇಹ ಕಾಣಿಸಿತು. ಸತ್ತಮಗನನ್ನು ಕಂಡೊಡನೆಯೆ ತಂದೆಯ ಹೃದಯ ಬಿರಿಯಿತು. ಕಣ್ಣೀರು ಧಾರೆಯಾಗಿ ಹರಿಯಿತು.

ಗಳಿತ ಶರವಾಯ್ತು ಹಸ್ತಂ
ಗಳಿತ ರಣೋತ್ಸಾಹವಾಯ್ತು
ಹೃದಯಂ ನಯನಂ
ಗಳಿತಾಶ್ರುವಾಯ್ತು ಕೌರವ
ಕುಳತಿಲಕಂಗಾ ಕುಮಾರನಂ
ಕಾಣಲೊಡಂ

ಮುಂದೆ ಬರುತ್ತಿರುವ ಹಾಗೆ ಕರ್ಣನ ಕಳೇಬರ ದುರ್ಯೋಧನನ ಕಣ್ಣನ್ನು ಸೆಳೆಯುತ್ತದೆ. ಈ ಸನ್ನಿವೇಶದಲ್ಲಿ ಕರುಣರಸದ ಉತ್ಕಟತೆಯನ್ನು ಕಾಣಬಹುದು. ಕರ್ಣ ಸತ್ತು ಬಿದ್ದಿದ್ದ ರೀತಿಯನ್ನು ನೋಡಿದಾಗ ದುರ್ಯೋಧನನಿಗೆ ಅವನ ವೀರಸಾವು ನೆನಪಿಗೆ ಬಂದಿತು. ಒಂದು ಕಡೆ ಕರ್ಣನ ರಥದ ಚಕ್ರ ಭೂಮಿಯಲ್ಲಿ ಇಳಿಯುತ್ತಿದೆ. ಕರ್ಣ ಒಂದು ಕೈಯಿಂದ ಚಕ್ರವನ್ನು ಎತ್ತುತ್ತಿದ್ದಾನೆ. ಮತ್ತೊಂದು ಕೈಯಲ್ಲಿ ಬಿಲ್ಲು ಹಿಡಿದು ತನ್ನ ಸ್ವಾಮಿಯ ಶತ್ರುವನ್ನು ಎದುರಿಸುತ್ತಿದ್ದಾನೆ. ಅವನ ಮುಖ ಒಡೆಯನ ಉಪ್ಪಿನಿಂದ ಋಣವನ್ನು ಹರಿಸದೆ ಸಾವಿಗೀಡಾದ ವೀರರನ್ನು ಅಣಕಿಸುವಂತಿದೆ. ಒಡಹುಟ್ಟಿದವರಿಗಿಂತಲೂ ಭೀಷ್ಮ ದ್ರೋಣಾದಿಗಳಿಗಿಂತಲೂ ಮಿಗಿಲಾಗಿದ್ದ– ಕರ್ಣನ ಸಾವಿನಿಂದ ಅವನ ದುಃಖ ನೂರ್ಮಡಿಯಾಗಿ ಸಹಿಸಲಸಾಧ್ಯವಾಗುತ್ತದೆ. ದುರ್ಯೋಧನ ಶೋಕದ ಬೇಗೆಯಲ್ಲಿ ದಹಿಸಿ ಹೋಗುತ್ತಿರುವನಂತೆ ಕಾಣುತ್ತಿದ್ದಾನೆ.

ಆನು ದುಶ್ಶಾಸನನುಂ
ನೀನುಂ ಮೂವರೆ ದಲಾತನಂ ಕಳೆದ ಬಳಿ
ಕ್ಕಾನುಂ ನೀನೆ ದಲೀಗಳ್
ನೀನುಮಗಲ್ದೆತ್ತವೋದೆಯಂಗಾಧಿ
ಪತೀ

ನಿನ್ನ ಕೆಳೆಯುಂ ಸುಯೋಧನ
ನಂ ನೋಡದೆ ನುಡಿಯದಪ್ಪಿಕೊಳ್ಳದೆ
ಬೆಸನೇ

ನೆನ್ನದೆ ಜೀಯೆನ್ನದೆ ದೇ
ವೆನ್ನದದೇಕುಸಿರದಿರ್ದೆಯಂಗಾಧಿಪತೀ

ನೀನುಳ್ಳೊಡುಂಟು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆ
ಯುಂಟಿಯ್

ನೀನುಳ್ಳೊಡುಂಟು ಪೀಳಿಗೆ
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ

ಹೀಗೆ ಕರ್ಣನ ಸಾಹಸ, ಪರಾಕ್ರಮ ಸತ್ಯ, ತ್ಯಾಗ ಮೊದಲಾದ ಸದ್ಗುಣಗಳನ್ನು ಅವನು ತನ್ನೊಡನೆ ಹೊಂದಿದ್ದ ಸ್ನೇಹಭಾವನೆಯನ್ನು ನೆನೆದು ರೋದಿಸುತ್ತಾನೆ. ಇಲ್ಲಿ ದುರ್ಯೋಧನನ ಪ್ರಾಮಾಣಿಕವಾದ ದುಃಖ ಪರಾಕಾಷ್ಠೆಯನ್ನೇ ಮುಟ್ಟಿದೆ. ಅಗಲಿದ ಗೆಳೆಯನಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುವ ದುರ್ಯೋಧನನ ದುಃಖವನ್ನು ಬಣ್ಣಿಸುವಲ್ಲಿ ಅತಿ ಮಹತ್ವದ ಶೋಕ ಕಾವ್ಯವನ್ನು ಕವಿ ರಚಿಸಿದ್ದಾನೆ.

ಕುಮಾರವ್ಯಾಸ ಭಾರತ:– ಕುಮಾರವ್ಯಾಸ ಭಾರತದಲ್ಲಿ ಅಭಿಮನ್ಯುವನ್ನು ಕಳೆದುಕೊಂಡ ಸುಭದ್ರೆಯ ಶೋಕವನ್ನು, ಧರ್ಮರಾಜನ ಸಂಕಟವನ್ನು ಕವಿ ಮನಮುಟ್ಟುವಂತೆ ವರ್ಣಿಸಿದ್ದಾನೆ.

ದ್ರೋಣಾಚಾರ್ಯರು ರಚಿಸಿದ್ದ ಚಕ್ರವ್ಯೂಹವನ್ನು ಭೇದಿಸಿ ಒಳನುಗ್ಗಿ ಕೌರವರೊಡನೆ ಸಿಂಹದಮರಿಯಂತೆ ಕಾದಾಡಿ ಕೌರವ ಪಕ್ಷದ ಅತಿರಥರನ್ನು ದಿಗ್ಭ್ರಮೆಗೊಳಿಸಿದವನು ಕುಮಾರ ಅಭಿಮನ್ಯು-ಇವನ ಪರಾಕ್ರಮಕ್ಕೆ ತತ್ತರಿಸಿ ಮಹಾವೀರರೆನಿಸಿಕೊಂಡವರೂ ಸಹ ಹೊಂಚುಹಾಕಿ ಬಾಲಕನನ್ನು ಕೊಂದರು. ಸಂಜಯನಿಂದ ಈ ಸಂಗತಿ ತಿಳಿದ ಧರ್ಮರಾಯನ ದುಃಖ ಮೇರೆ ಮೀರಿತು.

ಹೊರಳಿದನು ಹುಡಿಯೊಳಗೆ ಸಲೆಕಾ
ತರಿಸಿದನು ಮೋಹಾಂಧಕಾರಕೆ
ಕರಣವನು ಕೈಸೂರೆಗೊಟ್ಟನು ನಿಜ
ದೊಳೆಚ್ಚರದೆ

ಅಭಿಮನ್ಯು ಕುಮಾರನನ್ನು ನೆನಸಿಕೊಂಡು ಮುದ್ದುಬಾಲಕ ತನ್ನ ಮುಂದೆಯೆ ಇರುವನೆಂದು ಭಾವಿಸಿ ಅಪ್ಪುತ್ತಾನೆ. ಕವಿ ದುಃಖವಶನಾದ ಧರ್ಮರಾಯನ ಭ್ರಾಂತಿಯನ್ನು 'ಅಪ್ಪಿದನು ಬಯಲ'ಎಂದು ಬಹು ಮಾರ್ಮಿಕವಾಗಿ ಅಷ್ಟೇ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಯುದ್ಧದಲ್ಲಿ ಮಡಿದ ಅಭಿಮನ್ಯು ಮತ್ತೆ ಹಿಂತಿರುಗುವುದಿಲ್ಲ ಎಂಬ ವಾಸ್ತವ ಸಂಗತಿಯ ಅರಿವಾದೊಡನೆ ಧರ್ಮರಾಯ ದುಃಖದಿಂದ ನೆಲದಮೇಲೆ ಬಿದ್ದು ಹೊರಳಾಡುತ್ತಾನೆ. ಈ ದೃಶ್ಯವಂತೂ ಮನಮಿಡಿಯುವಂತೆ ಬಣ್ಣಿತವಾಗಿದೆ.

ಬಂದುಫಲುಗುಣನೆನ್ನ ಮೋಹದ
ಕಂದ ನಾವಡೆಯೆಂದಡಾನೇ
ನೆಂದು ಮಾರುತ್ತರವ ಕೊಡುವೆನು
ವೈರಿನಾಯಕರು

ಕೊಂದರೆಂಬೆನೆ ಮೇಣು ನಾನೇ
ಕೊಂದನೆಂಬೆನೊ ಶಿವ ಮಹಾದೇ
ವೆಂದು ಪುತ್ರ ಸ್ನೇಹ ಸಾರಂಭದಲ್ಲಿ
ಹಲುಬಿದನು

ಕ್ಷಣಾರ್ಧದಲ್ಲಿ ಅಭಿಮನ್ಯು ಸತ್ತ ಸುದ್ದಿ ಅರಮನೆಗೆ ಮುಟ್ಟಿತು. ಮಗನ ಸಾವಿನ ಸುದ್ದಿ ತಿಳಿದ ಸುಭದ್ರೆ ದಿಕ್ಕುಗೆಟ್ಟು ಧರ್ಮರಾಯನ ಬಳಿಗೆ ಬಂದು ದುಃಖದ ಆವೇಶದಲ್ಲಿ ಎಲ್ಲರನ್ನೂ ದೂಷಿಸುತ್ತ ಪ್ರಲಾಪಿಸುತ್ತಾಳೆ.

ಧುರವ ಹೊಗತಕ್ಕವನೆ ಚಿಕ್ಕವ
ನಿರಿಯಲಾಪನೆ ಬಹನೆ ಮರಳಿದು
ಧರೆಯ ವೈಭವಕಳುಪಿ ಕಳುಹಿದಿರೆನ್ನ
ಕಂದನನು
ವರಯುಧಿಷ್ಠಿರಜನಪ ಲೋಕದ

ಕರುಣೆಯೆಂಬರು ಕುನ್ನಿಗಳು ಮರೆ
ಗೊರಳುಗೊಯ್ಕನನರಿಯರೆಂದಳು
ಫಲುಗುಣನ ರಾಣಿ.

ಧರ್ಮರಾಜ ಭೀಮಾದಿಗಳು ರಾಜ್ಯಗಳಿಕೆಯ ಆಸೆಯಲ್ಲಿ ಏನೂ ಅರಿಯದ ಬಾಲಕನಾದ ತನ್ನ ಮಗನನ್ನು ಯುದ್ಧಕ್ಕೆ ಅಟ್ಟಿದರು ಎಂದು ಹೇಳುವಾಗ "ಧರೆಯ ವೈಭವ ಕಳುಪಿ ಕಳುಹಿದಿರೆನ್ನ ಕಂದನನು" ಎನ್ನುತ್ತಾಳೆ. ಮಗನ ಸಾವು ಆ ತಾಯ ಹೃದಯವನ್ನು ಇರಿಯುತ್ತಿದೆಯೆ ವಿನಹ ಆಕೆಗೆ ಜಯಾಪಜಯಗಳಾಗಲಿ, ರಾಜ್ಯಕೋಶಗಳಾಗಲಿ ಬೇಕಾಗಿಲ್ಲ. ತಾಯಿಗೆ ಸಮಸ್ತವೂ ಮಗನೇ. ಮಗನನ್ನು ಕಳೆದುಕೊಂಡ ಆ ಮಾತೃ ಹೃದಯದ ನೋವನ್ನು ಯಾವುದೂ ಶಮನಗೊಳಿಸಲಾರದು.

ಸುಭದ್ರೆಯ ಮಾತಿನ ವ್ಯಂಗ್ಯವನ್ನು ಸಹಿಸಲಾರದೆ ಧರ್ಮರಾಯ ತನ್ನ ಅಸಹಾಯಕತೆಯನ್ನು ತಿಳಿಸಿ ನಳಿನನಾಭನ ಕರುಣೆಯನ್ನು ಯಾಚಿಸುತ್ತಾನೆ.

ಹೀಗೆ ಕುಮಾರವ್ಯಾಸ ಭಾರತದಲ್ಲಿ ಸುಭದ್ರೆಯ ಪ್ರಲಾಪ, ಧರ್ಮರಾಯ ನಿಸ್ಸಹಾಯಕನಾಗಿ ನೊಂದು ತನ್ನನ್ನೇ ಹಳಿದುಕೊಂಡು ಪರಿತಪಿಸುವ ಸನ್ನಿವೇಶವನ್ನು ನಾರಣಪ್ಪ ವಾಚಕರ ಹೃದಯ ಕದಲುವ ಹಾಗೆ ವರ್ಣಿಸಿದ್ದಾನೆ.

ಹರಿಶ್ಚಂದ್ರ ಕಾವ್ಯ :- ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿನ ಚಂದ್ರಮತಿಯ ಪ್ರಲಾಪವಂತೂ ಉತ್ಕೃಷ್ಟ ಶೋಕ ಕಾವ್ಯವಾಗಿದೆ. ಕರುಣರಸಪ್ರತಿಪಾದನೆಗೆ ಷಟ್ಪದಿಯನ್ನು ಬಿಟ್ಟು ಮಂದಾನಿಲ ರಗಳೆಯನ್ನು ಉಪಯೋಗಿಸಿರುವುದರಿಂದ ಭಾವನೆಗಳು ಮತ್ತಷ್ಟು ಸಹಜವಾಗಿ ಅಭಿವ್ಯಕ್ತವಾಗಿದೆ. ಕರುಣರಸದ ಪ್ರವಾಹವೇ ಹರಿದಿದೆ.

ಎಂದಿನಂತೆ ಅಂದು ಚಂದ್ರಮತಿಯ ಮುದ್ದುಕುಮಾರ ಲೋಹಿತಾಶ್ವ ಕಟ್ಟಿಗೆಯನ್ನು ತರಲು ಕಾಡಿಗೆ ಹೋಗಿದ್ದಾನೆ. ಅರಣ್ಯದಲ್ಲಿ ಒಂದೆಡೆ ನಳನಳಿಸಿ ಬಿಟ್ಟಿದ್ದ ದರ್ಭೆಯನ್ನು ಕಂಡು ಅದನ್ನು ಕೊಂಡು ಹೋದರೆ ಮನೆಯ ಯಜಮಾನ ಕೋಪಿಸದೆ ಇರಬಹುದೆಂದು ತಿಳಿದು ಅದನ್ನು ಕತ್ತರಿಸಲು ಹೋಗುತ್ತಾನೆ. ಆದರೆ ಹುತ್ತದಲ್ಲಡಗಿದ್ದ ಹಾವೊಂದು ಲೋಹಿತಾಶ್ವನನ್ನು ಕಡಿಯುತ್ತದೆ. ವಿಷಹತ್ತಿ ಲೋಹಿತಾಶ್ವ ಮಡಿಯುತ್ತಾನೆ. ಇತ್ತ ಕಡೆ ಎಷ್ಟು ಹೊತ್ತಾದರೂ ಮಗ ಬಾರದೆ ಇರುವುದನ್ನು ಕಂಡು ಚಂದ್ರಮತಿ ಭಯಾತುರಗಳಿಂದ ಕಂಗೆಡುತ್ತಾಳೆ. ಯಾರು ಬಂದರೂ ನಿಂತರೂ ಲೋಹಿತಾಶ್ವನೆಂದೇ ಭ್ರಮಿಸುತ್ತಾಳೆ. ಗಾಳಿಯ ಸಪ್ಪಳಾದರೂ 'ಲೋಹಿತಾಶ್ವ' ಎಂದು ಕರೆಯುತ್ತ, ಹುಚ್ಚಿಯಂತಾಗಿ

ದ್ದಾಳೆ. ಅಷ್ಟರಲ್ಲಿ ಇತರ ಹುಡುಗರು ಬಂದು 'ಹಾವು ಕಚ್ಚಿ ಲೋಹಿತಾಶ್ವ ಕಾಡಿನಲ್ಲಿ ಸತ್ತು ಬಿದ್ದಿದ್ದಾನೆ' ಎಂಬ ವಾರ್ತೆ ತಿಳಿಸುತ್ತಾರೆ. ಹಡೆದೊಡಲು ಒಡೆದುಹೋಯಿತು. ಸತ್ತಮಗನ ಮುಖವನ್ನು ನೋಡಬೇಕೆಂಬ ಕಾತರದಿಂದ ಒಡೆಯನ ಅಪ್ಪಣೆ ಕೇಳಿದರೆ ಕಡುಧೂರ್ತನಾದ ಅವನಿಂದ ಒಪ್ಪಿಗೆ ಕೂಡಲೇ ದೊರೆಯುವುದಿಲ್ಲ. ಹೇಗೋ ಮನೆಗೆಲಸಗಳನ್ನು ಬೇಗಬೇಗನೆ ಮುಗಿಸಿಕೊಂಡು ಕಲ್ಲುಮುಳ್ಳು ತಿಳಿಯದೆ ಸತ್ತ ಮಗನಿದ್ದೆಡೆಗೆ ಓಡೋಡಿ ಬರುತ್ತಾಳೆ. ಪ್ರಿಯಕುಮಾರನ ಕಳೇಬರವನ್ನು ಕಂಡೊಡನೆ ಆಕೆಯ ದುಃಖ ಉಮ್ಮಳಿಸಿ ಮಗನ ದೇಹದ ಮೇಲೆ ಬಿದ್ದು ಹೊರಳಾಡುತ್ತಾಳೆ. ಈ ದೃಶ್ಯವಂತೂ ಎಂತಹವರ ಎದೆಯನ್ನೂ ಕರಗಿಸುವಂತೆ ಚಿತ್ರಿತವಾಗಿದೆ.

ಏವೇನೇವೆನೆಲೆ ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ
ಇರಿದೆಯಲ್ಲಾ ಎನ್ನನು ಸುಕುಮಾರಾ
ಎತ್ತಣ ಬರಸಿಡಿಲೆರಗಿತೊ ನಿನ್ನ
ಹುತ್ತಿನ ಹತ್ತಿರೆ ಒರಗಿದೆ ಚೆನ್ನ
ಹಾವು ಕಡಿಯೆ ಹಾ ಎಂದೊರಲಿದೆಯಾ
ಸಾವಾಗವ್ವ ಎಂದಳಲಿದೆಯಾ

ಅತಿ ಆಕಸ್ಮಿಕವಾಗಿ ಸಂಭವಿಸಿದ ಮಗನ ಮರಣದಿಂದ ಆಕೆಗೆ ತೀವ್ರವಾದ ಆಘಾತವಾಗಿದೆ. ಆಕೆ ತನ್ನ ಮಗ ಅಷ್ಟು ಬೇಗ ಸಾವಿಗೀಡಾಗುತ್ತಾನೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ. ಸಾವು ಆಕೆಯ ಕರುಳಿನ ಕುಡಿಯನ್ನು ಕತ್ತರಿಸಿಬಿಟ್ಟಿದೆ. ಬದುಕಿನ ಆಶಾಗೋಪುರವನ್ನೇ ಕೆಡಹಿಬಿಟ್ಟಿದೆ. ಸಿಡಿಲು ಹೊಡೆದಂತೆ ಸಾವು ತನ್ನ ಮಗನ ಪ್ರಾಣವನ್ನು ಕಸಿದಿದೆ. ಹಾವು ಕಚ್ಚಿದಾಗ ನೋವಿನಿಂದ ತನ್ನನ್ನು ಕೂಗಿ ಕರೆದಿರಬಹುದೆಂದು ಭಾವಿಸಿ ಆ ತಾಯಿ 'ಸಾವಾಗವ್ವಾ' ಎಂದು ಅಳಲಿದೆಯಾ ಎಂದು ದುಃಖಿಸಿದಾಗ ಆ ತಾಯಿ ಹೃದಯದ ನೋವು ಕಲ್ಲನ್ನೂ ಕರಗಿಸುವಂತಿದೆ.

'ರನ್ನದ ಕನ್ನಡಿ ಒಡಿಯಿತು ಹೊನ್ನಕಳಶ ಮುರಿದು ಬಿತ್ತು. ಇನವಂಶದ ಲತೆ ಮುರಟಿತ್ತು' ಎಂದು ನಾನಾ ವಿಧವಾಗಿ ದುಃಖಿಸುತ್ತಾಳೆ. ರಾಣಿಯಾಗಿದ್ದವಳು ದಾಸಿಯಾಗಿ ಪಡಬಾರದ ಕಷ್ಟಗಳನ್ನು ಅನುಭವಿಸುತ್ತಿದ್ದರೂ ತನ್ನ ಮುದ್ದು ಮಗನ ಮುಖವನ್ನು ನೋಡಿ ಅವುಗಳೆಲ್ಲವನ್ನೂ ಸಹಿಸುತ್ತಿದ್ದಳು. ವಿಧಿ ಈಗ ಆ ಭಾಗ್ಯವನ್ನೂ ಕಸಿದುಕೊಂಡಿದೆ. ಹೆತ್ತ ಹೊಟ್ಟೆ ದುಃಖಾಗ್ನಿಯಿಂದ ಸುಡುತ್ತಿದೆ. ಸೌಂದರ್ಯದ ಖನಿಯಾದ ತನ್ನ ಮಗನನ್ನು ಆಡಿಸಿದ ಕೈಗಳು ಕತ್ತರಿಸಿ ಹೋಗಿವೆ. ತನ್ನ ಮಗನ ಆಟಪಾಟಗಳನ್ನು ಹೊಗಳಿ ಹಾಡುತ್ತಿದ್ದ ಬಾಯಲ್ಲಿ ಮಣ್ಣು ಅದ್ದಿದೆ. ಒಟ್ಟಿನಲ್ಲಿ ಆಕೆಯ ಬದುಕೆಲ್ಲವೂ ಬರಿದಾಗಿ ಹಾಳು ಬಿದ್ದಿರುವ ಮರಳುಗಾಡಾಗಿದೆ.

ಮಾತನಾಡದೆ ಮಲಗಿರುವ ಮಗನನ್ನು ಕಂಡು ಮಗನಿಗೆ ಕೋಪ ಬಂದಿರಬಹುದೆಂದು ತಿಳಿದು 'ತನ್ನೊಡನೆ ಕೋಪವೇ?' ಎಂದು ಕೇಳಿ, ಕೋಪವನ್ನು ಬಿಟ್ಟು ತನ್ನೊಡನೆ ಮಾತಾಡಬೇಕೆಂದು ಕೇಳುವ ಚಂದ್ರಮತಿಯ ಅಳಲನ್ನು ಕವಿ ಮನಮುಟ್ಟುವಂತೆ ಬಣ್ಣಿಸಿದ್ದಾನೆ.

ಪಾಪಿಯೆನ್ನ ನೀನೊಮ್ಮೆಗೆ ನೋಡಾ
ಕೋಪವನುಳಿದೊಯ್ಯನೆ ಮಾತಾಡಾ
ನುಡಿದಡೆ ಪಾಪವೆ ಹೆತ್ತವರೊಡನೆ
ಕಡು ಮುಳಿಸೇ ಮಗನೇ ಎನ್ನೊಡನೆ

ಚಂದ್ರಮತಿ ತನ್ನನ್ನು ತಾನೇ ಹಳಿದುಕೊಂಡು 'ಪಾಪಿ' ಎಂದು ಕರೆದುಕೊಂಡಿದ್ದಾಳೆ. ತನ್ನ ಮಗನನ್ನ ಕಾಡಿಗೆ ಕಳುಹಿಸಿದ್ದು ತನ್ನದೇ ಅಪರಾಧವೆಂದು, ಅದಕ್ಕಾಗಿಯೇ ತನ್ನ ಮಗನು ತನ್ನ ಮೇಲೆ ಕೋಪಗೊಂಡಿರುವನೆಂದು ಭಾವಿಸುತ್ತಾಳೆ. ಇಲ್ಲಿ 'ಚಂದ್ರಮತಿ' ಒಬ್ಬ ಸಾಮಾನ್ಯ ಹೆಣ್ಣಿನಂತೆ ದಿಕ್ಕುಗೆಟ್ಟು ರೋದಿಸುವ ಚಿತ್ರವಂತೂ ಅತ್ಯಂತ ಸಹಜವಾಗಿ ಪಡಿಮೂಡಿದೆ. ಹರಿಶ್ಚಂದ್ರ ಕಾವ್ಯವೇ ಶೋಕರಸ ಪ್ರಧಾನವಾದ ಕಾವ್ಯ. ಅದರಲ್ಲಿಯೂ ಚಂದ್ರಮತಿಯ ಪ್ರಲಾಪದಂತಹ ಸನ್ನಿವೇಶಗಳು ಕರುಣೆಯ ಗಟ್ಟಿ ಓದುಗರ ಮನಸ್ಸು ಹೃದಯಗಳು ಅದರ ಪ್ರವಾಹದಲ್ಲಿ ತೋಯ್ದು ಹೋಗುತ್ತವೆ.

---

(10ನೇ ಪುಟದಿಂದ)

ಎಂದರೂ ಹೆಚ್ಚು ಕಡಿಮೆ ಒಂದೇ. ಗೀತೆಯಲ್ಲಿ ಶ್ರೀಕೃಷ್ಣ ಹೇಳಿರುವುದನ್ನೇ ದ್ವಯವು ತಮಿಳಿನಲ್ಲಿ ಹೇಳಿದೆ. ಆದರೆ ಗೀತೆಯ ಶ್ಲೋಕವು ಪರಮಾತ್ಮನಿಂದ ಅಭಯ ರೂಪವಾಗಿ ಬಂದಿರುವಂಥಾದ್ದು. ಅದಕ್ಕೆ ಸಿದ್ಧಿ ಹೇಗೆ? ಪರಮಾತ್ಮನ ವಚನ "ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ", ನಮ್ಮ ಪ್ರಪತ್ತಿಗೆ ಫಲವನ್ನು ಹೇಳುವುದರಿಂದ ಜೀವಿಗೆ ಒಂದು ಧೈರ್ಯ, ತನ್ನ ಕಾರ್ಯಕ್ಕೆ ಪರಮಾತ್ಮನೇ ಫಲ ಕರುಣಿಸುತ್ತಾನೆಂದು. ಆಂಡಾಳ್ ತನ್ನ ಪದ್ಯವೊಂದರಲ್ಲಿ ನಪ್ಪಿನ್ನೈಯನ್ನು ಕರೆದು, 'ತಾಯೆ ನಿನ್ನ ಗಂಡನಿಗೆ, ನಮ್ಮ ವಿಚಾರದಲ್ಲಿ ಶಿಫಾರಸ್ಸುಮಾಡೆ'ನ್ನುತ್ತಾಳೆ, ಹಾಗೂ 'ಅರಸರು ಅಭಿಮಾನವನ್ನು ತೊರೆದು ಪರಮಾತ್ಮನಿಗೆ ಶರಣಾದಂತೆ ನಾವೂ ನಿನಗೆ ಶರಣಾಗಿದ್ದೇವೆ' ಎನ್ನುತ್ತಾಳೆ ಇದು ಅನನ್ಯ ಭಕ್ತಿ ಶರಣಾಗತಿಗಳನ್ನು ತೋರುತ್ತವೆ.

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂದರೆ ಶರಣಾಗತಿಯೇ ತಾನೆ. ಈ ಪದ್ಯಕ್ಕೆ ವ್ಯಾಖ್ಯಾನಗಳು ಅನೇಕವಾಗಿವೆ. ವಿಷ್ಣು ಸಹಸ್ರನಾಮದಲ್ಲಿ, ಭೀಷ್ಮನ ಉತ್ತರವು (ಧರ್ಮರಾಯನ ಪ್ರಶ್ನೆಗೆ). ಧರ್ಮಗಳಲ್ಲಿ ಶ್ರೇಷ್ಠ ಯಾವುದೆಂದು ಸೂಚಿಸುತ್ತದೆ:

ಏಷಮೇ ಸರ್ವಧರ್ಮಾಣಾಂ
ಧರ್ಮೋಽಧಿಕತಮೋ ಮತಃ ।
ಯದ್ಭಕ್ತ್ಯಾ ಪುಂಡರೀಕಾಕ್ಷಂ
ಸ್ತವೈರರ್ಚೇನ್ನರಃ ಸದಾ ॥

ಎಂದರೆ ಪರಮಾತ್ಮನಿಗೆ ಶರಣಾಗಿ ಆತನ ದಿವ್ಯ ನಾಮ ಸಂಕೀರ್ತನೆ ಮಾಡುತ್ತಿದ್ದರೇ ಅದೇ ಶ್ರೇಷ್ಠವಾದ ಧರ್ಮ. ಮುಖ್ಯವಾಗಿ "ಸರ್ವ ಧರ್ಮಾನ್ ಪರಿತ್ಯಜ್ಯ" ಎಂಬುದರ ಅರ್ಥ ಭಗವಂತನನ್ನು ಆರಾಧಿಸುವುದಕ್ಕೆ ಬರುವಂಥ ಪ್ರತಿಬಂಧಕಗಳನ್ನು ವರ್ಜಿಸಬೇಕು ಎಂದು. ಮತ್ತೂ ಪರಮಾತ್ಮನ ಕೃಪೆಗೆ ಪ್ರಯತ್ನಮಾಡುತ್ತೇನೆಂದು ಜಂಭಪಡದೆ, ಫಲಾಭಿಲಾಷೆಯಿಲ್ಲದೆ ಪರಮಾತ್ಮನಲ್ಲಿ ಅನನ್ಯ ಭಕ್ತಿಯಿಂದ ಪ್ರಪತ್ತಿಮಾಡಬೇಕೆಂದು. "ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ಎಂದು ಪರಮಾತ್ಮನೇ ವಚನವಿತ್ತಿದ್ದಾನೆ. ಭಕ್ತಿಯಿಂದ ಪ್ರಪತ್ತಿ ಮಾಡಿದವನ ಪಾಪವು ಬೆಂಕಿಯಲ್ಲಿ ಹತ್ತಿ ಉರಿದು ಹೋಗುವಂತೆ ಭಸ್ಮವಾಗಿ, ಪರಮಾತ್ಮನು ಕಾಣಿಸಿಕೊಳ್ಳುತ್ತಾನೆ, ಕೃಪೆಮಾಡುತ್ತಾನೆ. (ತೀಯಿನಿಲ್ ತೂಶಾಹುಮ್).

ಈಗ ಪರಮಾತ್ಮನಲ್ಲಿ ಪ್ರಪತ್ತಿಮಾಡಿದ ಕೆಲವರನ್ನು ಜ್ಞಾಪಿಸಿಕೊಳ್ಳುವುದು ಉಚಿತ, ಧ್ರುವ ಬಾಲಕ, ಪ್ರಹ್ಲಾದ ಬಾಲಕ, ಇವರನ್ನು ಪರಮಾತ್ಮ ಕಾಪಾಡಿದ. ಕಾಕಾಸುರನು ಸೀತಮ್ಮನಲ್ಲೇ ಅಪಚಾರವೆಸಗಿ ಕಾಯುವವರಾರೂ ಇಲ್ಲದೇ ಹಿಂತಿರುಗಿ ಸ್ವಾಮಿಯಲ್ಲಿ ಶರಣಾಗತಿಮಾಡಲು ಸ್ವಾಮಿ ಅವನನ್ನು ರಕ್ಷಿಸಿದನು. ಗಜೇಂದ್ರನು ಮೊಸಳೆಯ ಹಿಡಿತದಿಂದ ತಪ್ಪಿಸಿಕೊಳ್ಳಲು ಸ್ವಾಮಿಯಲ್ಲಿ ಮೊರೆಯಿಟ್ಟ. ಸ್ವಾಮಿ ಭರದಿಂದ, ಅತಿತ್ವರೆಯಿಂದ ಅವನನ್ನು ಕಾಪಾಡಿದ. ದ್ರೌಪದಿ, ತನ್ನನ್ನು ರಕ್ಷಿಸುವ ಗಂಡಂದಿರು ಇದ್ದರೂ ಅವರು ಸಹಾಯಕ್ಕೆ ಬರದಿರಲು ಕೃಷ್ಣಾ ಎಂದು ಕೂಗಿದ ಮಾತ್ರಕ್ಕೆ ಅವಳ ಮಾನವನ್ನು ಕಾಪಾಡಲಿಲ್ಲವೆ? ಪರಮಾತ್ಮನಿಗೆ ಖಗವಾಗಲಿ, ಮೃಗವಾಗಲಿ ಹೆಣ್ಣಾಗಲಿ ಗಂಡಾಗಲಿ, ಬಾಲನಾಗಲಿ, ವೃದ್ಧನಾಗಲಿ ಎಲ್ಲರೂ ಒಂದೆ. ಪ್ರಪತ್ತಿಮಾಡಿದವರನ್ನು ಕಾಯದೆ ಬಿಟ್ಟ ಸಂದರ್ಭವೆ ಇಲ್ಲ. ಶರಣಾಗತ ವತ್ಸಲ ಎಂಬ ಬಿರುದನ್ನು ಹೊತ್ತಿರುವವನು ಅವನು. ಹೀಗೆ ಪರಮಾತ್ಮನ ಕಾರುಣ್ಯವು ಭಕ್ತನಿಗೆ ನೆಮ್ಮದಿಯನ್ನು ತರುವ ವಿಷಯ, ಇದು ಶ್ರೀವೈಷ್ಣವರ ತತ್ತ್ವದಲ್ಲಿ ಆಧಾರಸ್ತಂಭವಾಗಿದೆ, ಎಂದಮೇಲೆ ಈ ಮೂರು ಮಂತ್ರಗಳೂ ಜೀವನವನ್ನು ಸಾಗಿಸಲು ಮೂಲವಾದುವು, ಸಕಲಾರ್ಥಗಳನ್ನೂ ಒಳಗೊಂಡುವು – ವ್ಯಸನ ಭುಜಗ ಸಂದಷ್ಟ ಸಂತ್ರಾಣ ಮಂತ್ರಗಳು.

ಪುರುಷಾರ್ಥವನ್ನು ಮೂಲಮಂತ್ರದಲ್ಲೂ ದ್ವಯದಲ್ಲೂ ಹೇಳಿದೆ, ಪ್ರಣವವೇ (ಓಂ) ಒಂದು ಪುರುಷಾರ್ಥ. ಅದನ್ನು ಸೇರಿಸಿಕೊಂಡಿರುವ "ಓಂ ನಮೋ ನಾರಾಯಣಾಯ" ಇನ್ನೂ ಹೆಚ್ಚಿನದು. ಪಠನ ಮಾತ್ರದಿಂದಲೇ ಫಲವನ್ನು ಕೊಡುವ ಮಂತ್ರ. ಇದನ್ನು ಶ್ರೀರಾಮಾನುಜರು ತಮ್ಮ ಗುರುಗಳಿಂದ ಕಷ್ಟಪಟ್ಟು ತಿಳಿದುಕೊಂಡು, ರಹಸ್ಯವಾದ ಮಂತ್ರವೆಂದು ಗುರುಗಳು ತಿಳಿಸಿದ್ದರೂ ಲೋಕಕ್ಕೆ ಒಳ್ಳೆಯದಾಗಲಿ ಎಂದು ಅದನ್ನು ಬಹಿರಂಗ ಪಡಿಸಿದರು. ಗುರುಗಳಿಗೆ ಕೋಪ ಬರಲಿಲ್ಲ. ಶಿಷ್ಯನ ಹೃದಯ ವೈಶಾಲ್ಯವನ್ನು ಕಂಡು ಆನಂದಪಟ್ಟರು. ಈ ಮಂತ್ರಕ್ಕೂ ಅತಿಶಯವೆಂದು ಪ್ರಸಿದ್ಧವಾಗಿರುವುದು ದ್ವಯ, "ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ ಶ್ರೀಮತೇ ನಾರಾಯಣಾಯ ನಮಃ" ಶ್ರೀಲಕ್ಷ್ಮಿಯಿಂದ ಕೂಡಿದ ನಾರಾಯಣನ ಪಾದಕ್ಕೆ ನಾನು ಶರಣ ಎಂಬುದು ಇದರ ಅರ್ಥ. ಇದು ಶ್ರೀವೈಷ್ಣವರಿಗೆ ಅತ್ಯಂತ ಪ್ರಿಯವಾದದ್ದು, ಶ್ರೀ ಲಕ್ಷ್ಮಿಯು ಕರುಣಾಮಯಿ, ಮಂಗಳೆ, ನಾರಾಯಣನ ಅರ್ಧಾಂಗಿ. ಅವಳು ನಾರಾಯಣನ ಜೊತೆಯಿಲ್ಲದ ಸಮಯದಲ್ಲಿ ನಾರಾಯಣನು ಉಗ್ರನೆ. ಇಂಥಾ ಸಂದರ್ಭಗಳು ರಾಮಾಯಣದಲ್ಲಿವೆ. ಆ ಕಾರಣ ಲಕ್ಷ್ಮೀಸಮೇತನಾದ ನಾರಾಯಣನನ್ನು ಶರಣು ಹೊಕ್ಕರೆ ಕಾರ್ಯಸಿದ್ಧಿ ಅತ್ಯಂತ ಶೀಘ್ರ. ಈ ವಿಷಯವನ್ನು ವಿಶಿಷ್ಟಾದ್ವೈತವು ಪ್ರತಿಪಾದಿಸುತ್ತದೆ, ಅದನ್ನು ಆಂಡಾಳ್ ತನ್ನ ತಿರುಪ್ಪಾವೈಯಲ್ಲಿ ಚಾತುರ್ಯದಿಂದ ಹೇಳಿದಿದ್ದಾಳೆ.

# ಹೊಸ ಊಂಜಲ್ ಸೇವೆ

ಶ್ರೀ ವೆಂಕಟೇಶ್ವರಸ್ವಾಮಿಯನ್ನು ಭಕ್ತರು ಅರ್ಚಿಸಲು ಅನುವಾಗುವಂತೆ ಪರಂಪರೆಯಿಂದ ನಡೆಯುತ್ತಿರುವ ಊಂಜಲ್ ಸೇವೆಯೊಂದಿಗೆ ಅಪೂರ್ವವಾದ ಹೊಸ ಊಂಜಲ್‌ಸೇವೆಯನ್ನು ಆರಂಭಿಸಲಾಗಿದೆ.

ಹೆಚ್ಚು ಮಂದಿ ಭಕ್ತರು ಸ್ವಾಮಿಯ ಆರಾಧನೆ ಮಾಡಲು ಅನುಕೂಲವಾಗುವಂತೆ ಆಲಯದ ಹೊರಗಣ ಖನಿಜ ಮಂಟಪದಲ್ಲಿ ಈ ಹೊಸಸೇವೆಯನ್ನು ಏರ್ಪಾಡು ಮಾಡಲಾಗುತ್ತದೆ. ಈ ಸೇವೆಗಾಗಿ ರೂ 3000/– ಶುಲ್ಕ ನೀಡಬೇಕಾಗುತ್ತದೆ.

ಹೊಸ ಊಂಜಲ್‌ಸೇವೆ ಮಾಡಿಸಲು ಗೃಹಸ್ಥರು ಮುಂದೆ ಬಾರದಿದ್ದ ದಿನಗಳಲ್ಲಿ ಊಂಜಲ್‌ಸೇವೆ ಮುಕುರಮಂಟಪದಲ್ಲಿ ನಡೆಯುತ್ತದೆ. ಈ ಸೇವೆಗೆ ಭಕ್ತರು ರೂ 1500/ ಸಲ್ಲಿಸಬೇಕಾಗುತ್ತದೆ.

# ಗೀತೆಯ ವಿಚಾರ

ಶ್ರೀ ಆರ್. ಗುರುರಾಜಗುಡಿ, ಬಿ.ಎ.

ಭಾರತೀಯ ಸಂಸ್ಕೃತಿಯನ್ನು ಬೆಳಗುತ್ತಿರುವ, ವಿಶ್ವಸಾಹಿತ್ಯದಲ್ಲಿಯೇ ಎಲ್ಲ ದೃಷ್ಟಿಯಿಂದಲೂ ಮಹೋನ್ನತವಾದ ಲೋಕ ವಿಖ್ಯಾತ ಮೇರು ಕೃತಿ ಎಂದರೆ ಮಹಾಭಾರತ. ಇಂತಹ ಮಹಾಭಾರತದಲ್ಲಿ ಸೇರಿದ ಒಂದು ಭಾಗವೇ "ಭಗವದ್ಗೀತೆ". ಇದು ಶ್ರೀ ಕೃಷ್ಣನು ಕುರುಕ್ಷೇತ್ರದಲ್ಲಿ ಕೌರವ–ಪಾಂಡವರ ಯುದ್ಧ ಪೂರ್ವದಲ್ಲಿ ಅರ್ಜುನನಿಗೆ ಉಪದೇಶಿಸಿದ ವಿಷಯಗಳನ್ನೊಳಗೊಂಡಿದೆ.

ಈ ಗೀತೆಯ ಬಗ್ಗೆ ಹಲವರು ಹೀಗೆ ಪ್ರಶ್ನಿಸುತ್ತಾರೆ. 1) ಇಷ್ಟೊಂದು ವಿಸ್ತಾರವಾದ (700 ಶ್ಲೋಕಗಳು) ಗೀತೆಯನ್ನು ಯುದ್ಧ ನಡೆವ ಅಥವಾ ಪೂರ್ವಸಂದರ್ಭದಲ್ಲಿಯೇ ಅಷ್ಟೊಂದು ಅಲ್ಪ ವೇಳೆಯಲ್ಲಿ ಬೋಧಿಸಲು ಹೇಗೆ ಸಾಧ್ಯ? 2) ಕೌರವ – ಪಾಂಡವರ ದಾಯಾದಿ ಕಲಹದ ವಿಚಾರ ಹೊಂದಿದ ಮಹಾಭಾರತ–ತದಂಗವಾದ ಭಗವದ್ಗೀತೆಯಿಂದ ಆಗುವ ಪ್ರಯೋಜನವೇನು? 3) ಗೀತೆಯ ಉಪದೇಶ ಅರ್ಜುನನನ್ನು ಕುರಿತದ್ದು. ಆದ್ದರಿಂದ ನಮಗೆ ಅದು ಅನ್ವಯಿಸುವುದಿಲ್ಲ. ಅದರ ಅವಶ್ಯಕತೆಯೂ ಇದ್ದಂತಿಲ್ಲ.

ಈ ಪ್ರಶ್ನೆಗಳಿಗೆ ಹೀಗೆ ಉತ್ತರಿಸಬಹುದು. ಮೊದಲನೆಯದಾಗಿ ಅಲ್ಪ ವೇಳೆಯಲ್ಲಿ ಅಷ್ಟೊಂದು ಉಪದೇಶ ಸಾಧ್ಯವೆ? ಎಂಬ ಪ್ರಶ್ನೆಗೆ ಉತ್ತರ–ಈಗ ನಮಗೆ ದೊರೆಯುವ 700 ಶ್ಲೋಕಗಳಷ್ಟು ವಿಸ್ತಾರವಾಗಿ ಹಾಗೂ ಇದೇ ಅನುಪೂರ್ವಿಯಲ್ಲಿ ಕೃಷ್ಣ ಅರ್ಜುನನಿಗೆ ಉಪದೇಶಿಸಲಿಲ್ಲ. ಕೃಷ್ಣನ ಉಪದೇಶ ಸಂಗ್ರಹಿಸಿ ಈಗ ದೊರೆಯುವ ರೀತಿಯಲ್ಲಿ ರಚಿಸಿದವರು ವೇದವ್ಯಾಸರು. ಅಕ್ಷರಾಭ್ಯಾಸ ಮಾಡುತ್ತಿರುವ ಮಗುವಿಗೆ ಪುಟದಷ್ಟು ವಿಷಯವನ್ನು ಬರೆಯಲು ಬಹಳ ಸಮಯ ಬೇಕಾದರೂ ನುರಿತ ಲೇಖಕನಿಗೆ ಅಷ್ಟು ಸಮಯದ ಅಗತ್ಯವಿಲ್ಲ. ಅದನ್ನೇ ಕೇವಲ ಬಾಯಿಯಲ್ಲಿ ಹೇಳಲು ಅದಕ್ಕೂ ಕಡಿಮೆ ಅವಧಿಯೇ ಸಾಕು. ಏನೂ ಅರಿಯದವರಿಗೆ ವಿಷಯ ತಿಳಿಸಲು ಕಾಲಾವಕಾಶ ಬಹಳ ಬೇಕಾದರೂ, ತಿಳಿದವರೊಂದಿಗೆ ಅಷ್ಟು ವಿಷಯ ತಿಳಿಸಲು ಅಷ್ಟು ವೇಳೆ ವ್ಯರ್ಥವೇ ಸರಿ. ಸಾಮಾನ್ಯ ಜನರ ವ್ಯವಹಾರದಲ್ಲಿಯೇ ವಿಷಯೋಪದೇಶಕ್ಕಾಗಿ ಅಲ್ಪ ವೇಳೆ ಸಾಕೆಂಬುದು ನಮಗೆ ಗೊತ್ತಿರುವ ಸಂಗತಿ. ಗೀತೆಯ ಬಗ್ಗೆ ಹೇಳುವಾಗ-ಕೇಳುವವನು ಅಪರೋಕ್ಷಜ್ಞಾನಿಯಾದ ಇಂದ್ರಪುತ್ರ ಅರ್ಜುನ. ಉಪದೇಶ ನೀಡುವವನಂತೂ ಸರ್ವಜ್ಞಮೂರ್ತಿ ಶ್ರೀಕೃಷ್ಣ. ಇಂಥವರ ನಡುವಣ ಉಪದೇಶಕ್ಕೆ ಎಷ್ಟು ವೇಳೆ ಬೇಕಾದೀತು? ಬಹುಶಃ ಊಹೆಗೂ ನಿಲುಕಲಾರದಾದೀತು. ಅದು ಅಷ್ಟು ಅತ್ಯಂತ ಅಲ್ಪಾವಧಿಯದಾಗಿದೆ.

ಮಹಾಭಾರತದ ಕಥಾವಸ್ತು ಕೌರವ ಪಾಂಡವರಿಗೆ ಸಂಬಂಧಿಸಿದ್ದೇನೋ ನಿಜ. ಆದರೆ ಮಹಾಭಾರತ ಕೌರವ–ಪಾಂಡವರ ಕಲಹವನ್ನು ಮಾತ್ರ ಹೇಳಲು ಹೊರಟಿಲ್ಲ. ಕುರುಕ್ಷೇತ್ರಯುದ್ಧದ ಹಿನ್ನೆಲೆ ಕಾರಣ – ಮುಂತಾದವುಗಳನ್ನು ವಿವರಿಸುವಾಗ ದಾಯಾದಿ ಕಲಹವೂ ಒಂದಂಶವಾಗಿದೆ ಅಷ್ಟೆ. ಅನೇಕ ವೇದೋಪನಿಷತ್ತುಗಳ, ಸ್ಮೃತಿ–ಪುರಾಣಗಳ ಮುಖ್ಯವಾದ ಹಾಗೂ ಉಪಯುಕ್ತವಾದ ಅನೇಕ ವಿಷಯಗಳನ್ನು ಎಲ್ಲರಿಗೂ ತಿಳಿಯಪಡಿಸುವ ಉದ್ದೇಶ ಹೊಂದಿಯೇ ಈ 'ಮಹಾಭಾರತ' ನಿರ್ಮಾಣಗೊಂಡಿದೆ ಎಂಬ ವಿಷಯ "ಸ್ತ್ರೀ ಶೂದ್ರ ಬ್ರಹ್ಮ ಬಂಧೂನಾಂ ತ್ರಯೀ ನ ಶ್ರುತಿ ಗೋಚರಾ, ಇತಿ ಭಾರತ ಮಾಖ್ಯಾನಂ ಕೃಪಯಾ ಮುನಿನಾಕೃತಂ"ಎಂಬ ಮಹಾಭಾರತ ರಚನೆಯ ಹಿನ್ನೆಲೆಯನ್ನು ಪರಿಶೀಲಿಸಿದವರಿಗೆ ಗೋಚರಿಸದಿರದು. ಹೀಗೆ ರಾಜನೀತಿ, ಲೋಕನೀತಿ, ವೇದಾಂತ ತತ್ತ್ವ ಇತ್ಯಾದಿ ಎಲ್ಲ ವಿಷಗಳನ್ನೊಳಗೊಂಡ "ವಿಶ್ವಕೋಶ"ವೆಂದು ಮಹಾಭಾರತವು ಪರಿಗಣಿತವಾಗಿದೆ.

ಅರಸುಗಳಿಗಿದು ವೀರ ದ್ವಿಜರಿಗೆ
ಪರಮ ವೇದದ ಸಾರ ಯೋಗೀ
ಶ್ವರರ ತತ್ತ್ವವಿಚಾರ ಮಂತ್ರಿ ಜನಕ್ಕೆ ಬುದ್ಧಿ ಗುಣ
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು .................. ಎಂದು

ಮುಂತಾಗಿ ಭಾರತದ ಗುಣಗಾನ ಮಾಡಲಾಗಿದೆ. "ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್", "ಮಹತ್ವಾತ್ ಭಾರವತ್ವಾಚ್ಚ ಮಹಾಭಾರತ ಮುಚ್ಯತೇ" ಮುಂತಾದ ಮಾತುಗಳೂ ಮಹಾಭಾರತ ಹಿರಿಮೆ, ಗರಿಮೆ, ಮಹಿಮೆಗಳನ್ನು ಸಾರುತ್ತಿವೆ. ಮಹಾಭಾರತವೂ ಲಕ್ಷ ಶ್ಲೋಕಗಳನ್ನು ಹೊಂದಿ ವಿಶ್ವ ಸಾಹಿತ್ಯದಲ್ಲಿಯೇ ಅತ್ಯಂತ ವಿಸ್ತೃತ ಹಾಗೂ ಮಹತ್ತ್ವ ಪೂರ್ಣ ಗ್ರಂಥವೆನಿಸಿದೆ. ಆದ್ದರಿಂದ ಇದನ್ನು 'ಕೌರವ–ಪಾಂಡವರ ಕಲಹ'ದ ವಿಚಾರವೆಂದು ಲಘುವಾಗಿ ಪರಿಗಣಿಸಲಾಗದು.

2ನೆಯದಾಗಿ ಕೌರವ–ಪಾಂಡವರ ಯುದ್ಧದ ವಿಚಾರವನ್ನೇ ತೆಗೆದುಕೊಳ್ಳೋಣ. ನಾವಿಂದು ಕೆಲವೆಡೆ ಅಣ್ಣ ತಮ್ಮಂದಿರು ಆಸ್ತಿಗಾಗಿ ಜಗಳಾಡಿದಂತೆ ಇದೂ ಸಹ ಒಂದು ಅದೇ ಮಾದರಿಯದು ಎಂದು ಇದನ್ನು ತಳ್ಳಿಹಾಕುವಂತಿಲ್ಲ. ಇದು ಆಸ್ತಿಗಾಗಿ ನಡೆದ ಜಗಳವಲ್ಲ. ಇದು ಧರ್ಮ–ಅಧರ್ಮಗಳ ಹೋರಾಟ, ಸತ್ಯ– ಅಸತ್ಯಗಳ ಕಾದಾಟ,



ನ್ಯಾಯ–ಅನ್ಯಾಯಗಳ ಸಮರ. ದುರ್ಮಾಂಸ ಬೆಳೆಯಲು ಅವಕಾಶ ಕೊಟ್ಟರೆ ಇಡೀ ಶರೀರವೇ ನಾಶವಾಗುವಂತೆ,ದುರ್ಯೋಧನನಂತಹ ಸ್ವಾರ್ಥಿ, ಸರ್ವಾಧಿಕಾರಿ ದುಷ್ಟಕೂಟದಿಂದ ಇಡೀ ದೇಶವೇ ವಿನಾಶಕಾರಿ ಹಂತವನ್ನು ತಲುಪಿತ್ತು. ಕೌರವ–ಪಾಂಡವರ ಯುದ್ಧದ ಹಿನ್ನಲೆ–'ದುಷ್ಟರ ಸಂಹಾರ ಶಿಷ್ಟರ ಉದ್ಧಾರ', 'ದ್ರೋಹಿಗಳ ಅಳಿವು–ಸತ್ಯಜಿಗಳ ಉಳಿವು' ಎನ್ನುತ್ತಂಬುದನ್ನು ನಾವು ಮರೆಯುವಂತಿಲ್ಲ. ಈ ಕೌರವ ಪಾಂಡವರ ಯುದ್ಧದ ಹಿನ್ನೆಲೆಯಲ್ಲಿ ಬರಬಹುದಾದ ಕೌರವರ ಅಕರ್ತವ್ಯ, ಅನ್ಯಾಯ, ಅಧರ್ಮ ಮುಂತಾದವುಗಳ ಹಾಗೂ ಪಾಂಡವರ ಕರ್ತವ್ಯ, ನ್ಯಾಯ, ಧರ್ಮ ಮುಂತಾದವುಗಳ ಸೂಕ್ಷ್ಮ ವಿಚಾರಗಳನ್ನು ಮತ್ತು ಅದಕ್ಕೆ ಪ್ರಾಸಂಗಿಕವಾಗಿ ರಾಜನೀತಿ, ಪ್ರಜೆಗಳ ಕರ್ತವ್ಯ ಮುಂತಾದ ಪ್ರಮುಖ ವಿಷಯಗಳನ್ನು ಸಾಧಾರವಾಗಿ ವಿಮರ್ಶಿಸಿ, ಸಮರ್ಥಿಸಿ, ವಿವರಿಸಲಾಗಿದೆ.

3 ನೆಯದಾಗಿ 'ಏವಂ ಅಧ್ಯಾತ್ಮನಿಷ್ಠಂ ಹಿ ಸರ್ವಂ ಭಾರತ ಮುಚ್ಯತೇ' ಎಂಬುದಾಗಿ ಭಾರತಕ್ಕೆ ಆಧ್ಯಾತ್ಮಿಕ ಪರವಾದ ಅರ್ಥವೂ ಇದೆಯೆಂದು ಹೇಳಲಾಗಿದೆ. 'ಶರೀರ ಮಾದ್ಯಂ ಖಲು ಧರ್ಮಸಾಧನಂ' ಎಂದಂತೆ ಮಾನವಶರೀರ ಅಥವಾ ನಮ್ಮ ಜೀವನ ಧರ್ಮಕ್ಷೇತ್ರವಾಗಿದೆ. ದೈವೀಶಕ್ತಿ–ಅಸುರೀಶಕ್ತಿಗಳ ಹೋರಾಟ ಇಲ್ಲಿ ಪ್ರತಿನಿತ್ಯ ನಡೆಯುತ್ತಿರುವುದರಿಂದ ಇದು ಕುರುಕ್ಷೇತ್ರವೂ ಆಗಿದೆ. ದುರ್ಜನರ ಸಂಖ್ಯೆ ಯಾವಾಗಲೂ ಹೆಚ್ಚಾಗಿಯೇ ಇರುತ್ತದೆ. ಸಜ್ಜನರು ಕಡಿಮೆ ಸಂಖ್ಯೆಯಲ್ಲಿರುತ್ತಾರೆ. ಮಹಾಭಾರತ ಯುದ್ಧದಲ್ಲಿ ಕೌರವ ಸಂಖ್ಯೆ 11 ಅಕ್ಷೋಹಿಣಿ ಸೈನ್ಯವಾದರೆ ಪಾಂಡವರದು 7 ಅಕ್ಷೋಹಿಣಿ ಸೈನ್ಯ. ಪಾಂಡವರು ಐವರಿದ್ದರೆ ಕೌರವರು ನೂರುಮಂದಿ. ಅದರಂತೆ ನಮ್ಮಲ್ಲಿಯೂ ಸದ್ವಿಚಾರಗಳಿಗಿಂತ ಅಸದ್ವಿಚಾರಗಳೇ ಹೆಚ್ಚಾಗಿ ಹೊಳೆಯುತ್ತವೆ. ನೆನಪಿರುತ್ತವೆ. ಪಾಂಡವರು ಅಜ್ಞಾತವಾಸದಲ್ಲಿರುವವರೆಗೆ ದುಷ್ಟರಾದ ಕೌರವರೇ ಆಳ್ವಿಕೆ ನಡೆಸುತ್ತಿದ್ದಂತೆ ನಮ್ಮಲ್ಲಿಯೂ ದಯೆ ಸತ್ಯ ಪ್ರಾಮಾಣಿಕತೆ ಮುಂತಾದ ಗುಣಗಳು ಸುಪ್ತವಾದಾಗ ದುರ್ಗುಣಗಳೇ ಮೇಲಕ್ಕೇರಿ ನಮ್ಮ ಮೇಲೆ ಆಳ್ವಿಕೆ ನಡೆಸುತ್ತವೆ. ಆದರೆ ಕೊನೆಗೆ ಅಲ್ಲಿ ಬಹು ಸಂಖ್ಯೆಯಲ್ಲಿದ್ದರೂ ಕೌರವರಿಗೆ ಜಯ ದೊರೆಯದೆ ಅಲ್ಪ ಸಂಖ್ಯೆಯಲ್ಲಿದ್ದ ಪಾಂಡವರಿಗೇ ಜಯಶ್ರೀ ಒಲಿದಳು. ಅದಕ್ಕೆ ಕಾರಣ ಸತ್ಯ, ಧರ್ಮ ಮುಂತಾದ ಸದ್ಗುಣಗಳ ಸಾಕಾರ ಮೂರ್ತಿಯಾದ ಶ್ರೀಕೃಷ್ಣನ ಸಹಾಯವೆಂಬ ಪ್ರಬಲ ಸಾಮರ್ಥ್ಯ ಪಾಂಡವರಲ್ಲಿತ್ತು. ದುರ್ಯೋಧನನು ಗೊಲ್ಲ ಕೃಷ್ಣನಿಂದೇನಾದೀತೆಂದು ಆತನನ್ನು ದೂರವಿರಿಸಿದಂತೆ ನಾವು ಸತ್ಯ, ಧರ್ಮ, ಮುಂತಾದ ಸದ್ಗುಣಗಳನ್ನು ನಿರುಪಯೋಗಿಗಳೆಂದು ದೂರವಿರಿಸಿದ್ದೇ ಆದರೆ ನಾವು ದುರ್ಯೋಧನ, ದುಃಶಾಸನರಂತೆಯೇ ಆಗಿ ಅವರ ಗತಿ ನಮಗೂ ಒದಗುವುದರಲ್ಲಿ ಸಂದೇಹವಿಲ್ಲ. ಆ ಪಾಂಡವರ–ಕೌರವರ ಧರ್ಮಾಧರ್ಮಯುದ್ಧದಲ್ಲಿ ಧರ್ಮಕ್ಕೇ ಜಯಲಭಿಸಿ ಧರ್ಮರಾಜನಿಗೇ ಪಟ್ಟಾಭಿಷೇಕ ನಡೆದಂತೆ, ನಾವು ಸತ್ಯ, ಧರ್ಮ ಮುಂತಾದಗುಣಗಳನ್ನು ಹೆಚ್ಚಿಸಿ ಸಾತ್ವಿಕ ಬಲವನ್ನು ಬೆಳಸಿ ಕೊಂಡಲ್ಲಿ ನಮ್ಮ ಜೀವನದಲ್ಲಿಯೂ ದಿನ ನಿತ್ಯ ನಡೆಯುವ ಸತ್‌ಶಕ್ತಿ–ಅಸತ್‌ಶಕ್ತಿಗಳ, ದುರ್ಗುಣ – ಸದ್ಗುಣಗಳ ಆಂತರಿಕ ಸಮರದಲ್ಲಿ ಸಾತ್ವಿಕ ಬಲದ ಅಭಯಹಸ್ತದಿಂದ ಸತ್ ಶಕ್ತಿಗೇ ವಿಜಯ ದೊರೆತು ನಾವು ಉತ್ತಮ ವ್ಯಕ್ತಿಯಾಗುವ ಅವಕಾಶ ಪಡೆಯಲು ಖಂಡಿತ ಸಾಧ್ಯವಿದೆ ಈ ಸಂದೇಶವನ್ನೇ ಈ ಭಗವದ್ಗೀತೆ ಸಾರುತ್ತದೆ.

ಕೊನೆಯಪ್ರಶ್ನೆಗೆ ಈಗಾಗಲೇ ಸ್ವಲ್ಪ ಮಟ್ಟಿಗೆ ಉತ್ತರ ದೊರೆತಂತಾಗಿದೆ. ಆದರೂ ಮತ್ತೊಂದೆರಡು ವಿಷಯಗಳನ್ನು ಗಮನಿಸೋಣ. ಗೀತೆ ಅರ್ಜುನನಿಗೆ ಹೇಳಿದ ಉಪದೇಶವಾಗಿದ್ದರೂ ಅದು ಅವನಿಗೆ ಮಾತ್ರ ಸಂಬಂಧಿಸಿದ್ದೆಂದು ತಿಳಿಯಲಾಗದು. ಆಕಳ ಹಾಲು ಕರುವಿಗೆ ಹಾಗೂ ಇತರರಿಗೂ ಇರುವಂತೆ ಉಪನಿಷತ್ತುಗಳಿಂದ ಕರೆದ (ಹಿಂಡಿದ) ಗೀತೆ ಕರುವಿನ ಸ್ಥಾನದಲ್ಲಿರುವ ಅರ್ಜುನ ಹಾಗೂ ಉಳಿದೆಲ್ಲ ಜನರೂ ಈ ಗೀತಾಮೃತರಸವನ್ನು ಸವಿಯುವವರಾಗಿದ್ದಾರೆಂದು "ಪಾರ್ಥೋ ವತ್ಸಃ ಸುಧೀ ರ್ಭೋಕ್ತಾ" ಎಂದು ಹೇಳಲಾಗಿದೆ. 'ಗೀತೆ ಕರೆದ ಹಾಲಿನಂತೆ' ಎಂದು ಹೇಳಿದ್ದರಲ್ಲಿ ಇನ್ನೂ ಒಂದು ಸ್ವಾರಸ್ಯವಿದೆ. ಹಾಲು ಕರೆಯುವುದು ನಮಗೋಸ್ಕರವೇ, ಕರುವಿಗಂತೂ ಅಲ್ಲವೇ ಅಲ್ಲ. ಈ ಹಿನ್ನೆಲೆಯಲ್ಲಿ ಈ ಗೀತೆಯ ಸಂದೇಶಗಳು ನಮಗಾಗಿಯೇ ಇವೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಗೀತೆಯ ವಿಚಾರಗಳ ಆವಶ್ಯಕತೆಯ ಬಗ್ಗೆ ಎಷ್ಟು ಹೇಳಿದರೂ ಅದು ಮುಗಿಯುವುದೇ ಇಲ್ಲ. ಅದೆಲ್ಲವನ್ನೂ ಕಿರಿದಾದ ಈ ಲೇಖನದಲ್ಲಿ ವಿವರಿಸುವುದಂತೂ ಅಸಾಧ್ಯವೇ ಸರಿ. ಆದರೂ ಗೀತೆ ಬೋಧಿಸುವ ವಿಷಯಗಳ ಸ್ಥೂಲ ಪರಿಚಯ ಹೀಗೆ ಮಾಡಿಕೊಳ್ಳಬಹುದು.

ದುಃಖದ ಮೂಲ ಅಭಿಮಾನ, ಪಾಪದ ಮೂಲ ಆಸಕ್ತಿಗಳನ್ನು ಕಿತ್ತೊಗೆಯುವ ಬಗೆ, ಪ್ರತಿಯೊಬ್ಬನಿಗೂ ಯಾವಾಗಲೂ ಅವಶ್ಯವಾಗಿರುವ ಮಾನಸಿಕ ಸಮತೋಲ ಸ್ಥಿತಿ ಕಾಯ್ದುಕೊಳ್ಳುವುದಕ್ಕಾಗಿ ನಿಷ್ಕಾಮಕರ್ಮಾಚರಣೆ, ಕರ್ಮಯೋಗಿ ಪರಿಪೂರ್ಣನೆನಿಸಲು ಈಶಸೇವೆಯ ಜೊತೆಗೆ ಸಮಾಜ ಸೇವೆಯೂ ಅನಿವಾರ್ಯ, ಎಲ್ಲರೂ ತಿಳಿದಿರಬೇಕಾದ ನಾಸ್ತಿಕ್ಯವಾದದ ದುಷ್ಪರಿಣಾಮಗಳು, ದೈನಂದಿನ ವ್ಯವಹಾರಗಳಲ್ಲಿ ಪ್ರತಿಯೊಬ್ಬರೂ ಅಳವಡಿಸಿ ಕೊಳ್ಳಬೇಕಾದ ಧರ್ಮ, ಭಗವದಾರಾಧನೆ ಇವೇ ಮುಂತಾದ ವಿಷಯಗಳನ್ನು ಆಳವಾಗಿ ವಿವೇಚಿಸಿ, ವಿಸ್ತರಿಸಿ ಗೀತೆಯಲ್ಲಿ ಹೇಳಲಾಗಿದೆ. ವ್ಯಕ್ತಿವಿಕಾಸಕ್ಕೆ ಅವಶ್ಯವಾಗಿರುವ ಪ್ರಾಮಾಣಿಕತೆ, ಸ್ವಕರ್ತವ್ಯಾಚರಣೆ, ಭಗವದ್ಭಕ್ತಿ ಮುಂತಾದ ವಿಷಯಗಳನ್ನು ಗೀತೆಯಿಂದ ನಾವು ತಿಳಿಯಬಹುದಾಗಿದೆ. ಈ ಭಗವದ್ಗೀತಾ ಸಂದೇಶಗಳು ಆಚರಣೆಯಲ್ಲಿ ಬಂದದ್ದೇ ಆದರೆ ಎಲ್ಲೆಡೆ ಇಂದು ಕಾಣುವ ಅಶಾಂತಿ, ಭ್ರಷ್ಟಾಚಾರ ಮುಂತಾದ ಸಾಮಾಜಿಕ ಪೀಡೆಗಳು ತೊಲಗುವುದರಲ್ಲಿ ಸಂದೇಹವಿಲ್ಲ.

ಇದರಂತೆಯೇ ಗೀತೆಯ ಬಗ್ಗೆ ಇನ್ನೂ ಅನೇಕ ಪ್ರಶ್ನೆಗಳು ಬರಬಹುದು. ಅವೆಲ್ಲವನ್ನೂ ನಿರ್ಬಂಧಿತ ಲೇಖನದಲ್ಲಿ ವಿವರಿಸಲಸಾಧ್ಯ. ಗೀತೆಯೇ ಎಲ್ಲ ಪ್ರಶ್ನೆಗಳಿಗೂ ಸೂಕ್ತ ಸಮಾಧಾನವನ್ನು ನೀಡುವಂತಹದಾಗಿದೆ. ಆದರೆ ಗೀತೆಯ ಬಗ್ಗೆ ಅದನ್ನು ಕಾಣುವ ದೃಷ್ಟಿ ಬೆಳೆಸಿ ಕೊಳ್ಳಬೇಕಾದುದು ನಮ್ಮೆಲ್ಲರ ಕರ್ತವ್ಯವಾಗಿದೆ. 5000 ವರ್ಷಗಳ ಹಿಂದೆ ಉಪದೇಶಿತವಾದ ಗೀತೆ ಯಂತ್ರಯುಗದ ಅದು ನಿಕರಾದ ನಮಗೇಕೆ? ಎಂದೆನ್ನುವಂತಿಲ್ಲ. ಇವತ್ತು ಏನಾದರೂ ನಿಜವಾದ ಕೊರತೆ ಇದೆ ಎಂದು ಹೇಳುವ ಹಾಗಿದ್ದರೆ ಅದು ಗೀತೆಯ ಆದರ್ಶ, ಸಂದೇಶಗಳ ಆಚರಣೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಹಿಂದೆ, ಇಂದು, ಮುಂದೆ ಹೀಗೆ ಎಂದೆಂದಿಗೂ ಧ್ರುವ ನಕ್ಷತ್ರದಂತೆ ಶಾಶ್ವತವಾಗಿ ಎಲ್ಲರಿಗೂ ಮಾರ್ಗದರ್ಶಕವಾಗಿ ನಿಲ್ಲಬಲ್ಲುದು ಈ "ಭಗವದ್ಗೀತೆ". ಶ್ರೀಕೃಷ್ಣನು ಗೀತೆಯನ್ನು ಉಪದೇಶಿಸಿದ ದಿನವನ್ನು "ಗೀತಾ ಜಯಂತಿ" ಎಂದು ಆಚರಿಸಲಾಗುತ್ತದೆ. ಇದೇ ಡಿಸೆಂಬರ್ 26 ರಂದು "ಗೀತಾಜಯಂತಿ" ಈ ಸಂದರ್ಭದಲ್ಲಿ ಗೀತೆಯ ಶ್ರೇಷ್ಠ ಆದರ್ಶ, ಸಂದೇಶಗಳು ನಮ್ಮ ಕಣ್ಣುಮುಂದೆ ಸುಳಿಯಲಿ ಎಂದು ಹಾರೈಸುತ್ತೇನೆ.



# ಕಿಶೋರ ಜಗತ್



## ಮಹರ್ಷಿ ಜಮದಗ್ನಿ

ಮಹರ್ಷಿ ಜಮದಗ್ನಿ ತಪಸ್ವಿಯೂ, ವಿದ್ವಾಂಸನೂ ಆಗಿದ್ದ. ವೇದಗಳ ಬಹಳಷ್ಟು ಸೂಕ್ತಗಳು ಆತನಿಂದ ರಚಿತ. ಶ್ರಾದ್ಧ ವಿಧಿಯನ್ನು ಆರಂಭಿಸಿದ ಮೊದಲ ಋಷಿ ಈತ. ಶ್ರಾದ್ಧ ನೀವು ನೋಡಿರಬಹುದು. ಮನೆಯ ಹಿರಿಯರ ಮರಣ ತಿಥಿಯಲ್ಲಿ ಪ್ರತಿವರ್ಷವೂ ಮಾಡುವ ಕ್ರಿಯೆ. ಹಾಗೂ ಬ್ರಾಹ್ಮಣ ಭೋಜನ. ಅಂತೆಯೇ ವರ್ಷದಲ್ಲಿ ಇದಕ್ಕಾಗಿಯೇ ಮೀಸಲಾದ ಕೆಲವು ದಿವಸಗಳೂ ಇವೆ. ಆ ದಿನಗಳಲ್ಲಿ ಪ್ರತಿ ನಿತ್ಯ ತನ್ನ ಹಿರಿಯರ ನೆನಪಿಗಾಗಿ ಬ್ರಾಹ್ಮಣ ಭೋಜನ ಮಾಡಿಸಲಾಗುತ್ತದೆ. ಇಂಥ ನಿಯಮ ಪ್ರಾರಂಭಿಸಿದವನೇ ಜಮದಗ್ನಿ.

ಪರಶುರಾಮನ ಹೆಸರು ನೀವು ಕೇಳಿರಬಹುದು. ಈತ ಮಹಾ ಕೋಪಿಷ್ಠ. ಈತ ಜಮದಗ್ನಿಯ ಮಗ. ತಂದೆಯೂ ಮಗನಂತೆ ಮಹಾ ಕೋಪಿ. ಈತನ ಮಡದಿಯ ಹೆಸರು ರೇಣುಕೆ. ಒಂದು ಸಲ ಮಹರ್ಷಿ ಬಾಣ ಜಲಾಯಿಸುವ ಅಭ್ಯಾಸ ಮಾಡುತ್ತಿದ್ದ. ರೇಣುಕೆ ಸಲಸಲವೂ ಬಾಣ ಎತ್ತಿ ತಂದು ಕೊಡುತ್ತಿದ್ದಳು. ಹಗಲು ಹೊತ್ತು, ಪ್ರಚಂಡ ಬಿಸಿಲು, ಪಾಪ ಸೋತು ಒಂದು ಮರದಡಿಗೆ ಕುಳಿತಳು. ಋಷಿ ಆಕೆ ತಡವಾಗಿ ಬಂದ ಕಾರಣ ಕೇಳಿದ. ಆಕೆ ಬಿಸಿಲಿನ ಬೇಗೆಗೆ ಕುಳಿತೆ ಎಂದಳಂತೆ. ಇದನ್ನು ಕೇಳಿದ ಋಷಿ ಸೂರ್ಯನಿಗೇ ಬಾಣಪ್ರಯೋಗ ಮಾಡಲು ಹೊರಟನಂತೆ. ಯಾಕೆಂದರೆ ಬಿಸಿಲಿಗೆ ಕಾರಣ ಸೂರ್ಯ ತಾನೆ?

ಒಮ್ಮೆ ರೇಣುಕೆ ಸರೋವರಕ್ಕೆ ಸ್ನಾನ ಮಾಡಲು ಹೋದಳು. ಅಲ್ಲಿ ಕೆಲವು ಗಂಧರ್ವರು ಸ್ನಾನ ಮಾಡುತ್ತಿದ್ದರು. ಆಟವೂ ಆಡುತ್ತಿದ್ದರು. ರೇಣುಕೆ ಆಟ ನೋಡುತ್ತ ನಿಂತಳು. ಆಶ್ರಮಕ್ಕೆ ಬರಲು ತಡವಾಯಿತು. ಮಹರ್ಷಿ ಸಿಟ್ಟಿನಿಂದ ಬೆಂಕಿ ಆದ. ಆತ ತನ್ನ ನಾಲ್ಕು ಮಕ್ಕಳನ್ನು ಕರೆದು — ನಿಮ್ಮ ತಾಯಿಯನ್ನು ಕೊಂದುಹಾಕಿ, ಎಂದ.

ಮೂರು ಜನ ಮಕ್ಕಳು ತಾಯನ್ನು ಕೊಲ್ಲಲು ಒಪ್ಪಲಿಲ್ಲ. ಪರಶುರಾಮ ಎಲ್ಲರಿಂದ ಚಿಕ್ಕನ. ಆತನಿಗೂ ತಾಯಿಯನ್ನು ಕೊಲ್ಲಲು ದುಃಖವೇ. ಆದರೂ ತಂದೆಯ ಮಾತು ಮೀರುವುದು ಆಗಲಿಲ್ಲ. ತಾಯಿಯನ್ನು ಕಡಿದುಹಾಕಿದ. ಸಂತುಷ್ಟನಾದ ತಂದೆ 'ಬೇಕಾದ ವರ ಕೇಳು' ಎಂದ. ಮಗ ಪರಶುರಾಮ ಕೈಮುಗಿದು, 'ಅಪ್ಪ, ನೀವು ನಿಜವಾಗಿಯೂ ಸಂತುಷ್ಟರಾಗಿದ್ದರೆ ತಾಯಿಯನ್ನೂ ಪುನಃ ಬದುಕಿಸಿ' ಎಂದನಂತೆ.

ಹಾಗೇ ಆಯಿತು. ನಾವು ಹಿಂದಿನ ಕತೆಗಳ ಗೂಢಾರ್ಥವನ್ನು ತಿಳಿದಂತೆ ಇದರ ಗೂಢಾರ್ಥವನ್ನೂ ತಿಳಿಯಬೇಕು. ಜಮದಗ್ನಿಯ ಕೋಪದ ಅಧಿಕತೆಯನ್ನು ತೋರಿಸಲು ಈ ಕತೆಗಳು ರಚಿಸಲ್ಪಟ್ಟಿವೆ. ಏನೇ ಆಗಲಿ, ಇಷ್ಟು ಕೋಪಿಷ್ಠನಾದ ಜಮದಗ್ನಿಯೂ ಒಮ್ಮೆ ಪರಮ ಶಾಂತನಾದ. ಆತನನ್ನು ಪರೀಕ್ಷಿಸಲು ಕ್ರೋಧವು ಮಾನವ ರೂಪ ತಳೆದು ಆತನ ಬಳಿಗೆ ಬಂದಿತು. ಆದಿನ ಋಷಿ ಶ್ರಾದ್ಧಕ್ಕೆ ಪಾಯಸ ಮಾಡಿದ್ದ. ಕ್ರೋಧವು ಆ ಪಾಯಸದಲ್ಲಿ ವಿಷ ಬೆರೆಸಿತು. ಮಹರ್ಷಿ ಇದನ್ನು ತಿಳಿದೂ ಶಾಂತನಾಗಿ ತನ್ನ ಕೆಲಸ ಮುಂದುವರಿಸಿದ. ತುಸುವೂ ಕೋಪ ಬರಲಿಲ್ಲ. ಆಶ್ಚರ್ಯವಲ್ಲವೇ? ತುಸು ತಡವಾದುದಕ್ಕೇ ಮಡದಿಯನ್ನು ಕೊಲ್ಲಿಸಿದ ಋಷಿ ಈಗ ವಿಷ ಬೆರೆಸಿದರೂ ಸುಮ್ಮನಿದ್ದಾನೆ. ಮುಗುಳು ನಗುತ್ತಿದ್ದಾನೆ. ಅದ್ದರಿಂದಲೇ ಆತ ಮಹರ್ಷಿಯಾದ.

ಆತನ ಆಶ್ರಮದಲ್ಲಿಯೂ ಕಾಮಧೇನು ಇತ್ತು. ಒಮ್ಮೆ ರಾಜ ಕಾರ್ತವೀರ್ಯ ಆತನ ಆಶ್ರಮಕ್ಕೆ ಬಂದ. ಕಾಮಧೇನುವಿನ ಸಹಾಯದಿಂದ ವಿಧವಿಧವಾದ ಪಂಚಭಕ್ಷ್ಯಗಳಿಂದ ರಾಜನನ್ನು, ಪರಿವಾರವನ್ನು ಋಷಿ ಸತ್ಕರಿಸಿದ. ಇದನ್ನು ಕಂಡ ರಾಜ ಆಕಳನ್ನು ಕೇಳಿದ. ಆದರೆ ಋಷಿ ಅವನ್ನೆಂತು ಕೊಡಬಲ್ಲ? ಅದು ಇಂದ್ರನದು. ಆತ ಇಲ್ಲವೆಂದ. ರಾಜ ಸೇನಾ ಸಮೇತನಾಗಿ ಆಶ್ರಮದ ಮೇಲೇರಿ ಮಹರ್ಷಿಯನ್ನು ಕೊಂದು ಆಕಳನ್ನು ಕದ್ದೊಯ್ದ.

ಆಗ ಪರಶುರಾಮನ ತಾಯಿ ಅಳುತ್ತ ಅಳುತ್ತಾ 21 ಸಲ ತನ್ನ ಮಗನನ್ನು ಕರೆದಳು. ಕಾರ್ತವೀರ್ಯನು 21 ಬಾಣಗಳಿಂದ ಋಷಿಯನ್ನು ಕೊಂದಿದ್ದನೆಂದೂ ಹೇಳುತ್ತಾರೆ. ತಾಯಿಯ ಕೂಗು ಕೇಳಿ ಪರಶುರಾಮ ತಪೋವನದಿಂದ ಬಂದು ತಂದೆಯ ಗತಿ ನೋಡಿ, 'ನಾನು ಕಾರ್ತವೀರ್ಯನನ್ನು ಕೊಂದೇ ಕೊಲ್ಲುವೆ. ಜೊತೆಗೆ ಜಗತ್ತಿನ ಎಲ್ಲ ಕ್ಷತ್ರಿಯರನ್ನೂ ಕೊಂದು ಭೂಮಿಯ ಮೇಲಿನಿಂದ ಅವರ ಹೆಸರನ್ನೇ ಅಳಿಸಿ ಬಿಡುತ್ತೇನೆ' ಎಂದು ಪ್ರತಿಜ್ಞೆ ಮಾಡಿದ. ತನ್ನ ಪ್ರತಿಜ್ಞೆಯಂತೆ ಕಾರ್ತವೀರ್ಯನನ್ನು ಕೊಂದು ಕಾಮಧೇನುವನ್ನು ಕರೆತಂದ. ನಂತರ 21 ಸಲ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯರ ಕುಲವನ್ನೆಲ್ಲ ನಾಶ ಮಾಡಿದ. ಬಹಳ ಸ್ವಲ್ಪ ರಾಜರು ಅಲ್ಲಲ್ಲಿ ಅಡಗಿ ಕುಳಿತರು.

ಇದೇ ಪರುಶುರಾಮ ಸೀತಾ ಸ್ವಯಂವರದ ಸಂದರ್ಭದಲ್ಲಿ ಹೋಗಿ ಶಿವಧನುವನ್ನು ಮುರಿದ ಕಾರಣಕ್ಕಾಗಿ ರಾಮನನ್ನು ಕೊಲ್ಲ ಹೊರಟ. ರಾಮ ಆತನಿಂದ ಬಲಶಾಲಿ. ಆತ

'ರಸಿಕ ಪುತ್ತಿಗೆ'

# ತಿರುಮಲೆ

## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ.**

ಪರುಶುರಾಮನನ್ನು ಸೋಲಿಸಿದ. ಬಳಿಕ ಪರಶುರಾಮನೂ ತಪಸ್ಸಿಗಾಗಿ ದಕ್ಷಿಣದ ಕಡೆ ಬಂದ.

ಈ ಕಥೆಯ ಅರ್ಥ ಹೀಗಿದೆ: ಜಮದಗ್ನಿಯ ಕಾಲದಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯರ ನಡುವೆ ವೈರ ಹೆಚ್ಚಿತು. ಅನೇಕ ಸಲ ಇಬ್ಬರಲ್ಲೂ ಯುದ್ಧಗಳಾದವು. ಕೊನೆಗೆ ಋಷಿ ಮುನಿಗಳು ತಮ್ಮ ಸಿಟ್ಟನ್ನು ತ್ಯಜಿಸಿ ತಪೋವನಗಳ ಕಡೆಗೆ ಹೋಗಿ ಸಂಸ್ಕೃತಿ ಧರ್ಮದ ಪ್ರಚಾರ ಮಾಡಿದರು. ರಾಜ್ಯ ನಿರ್ವಹಣೆಯ ಭಾರ ರಾಜನ ಮೇಲೆಯೇ ಉಳಿಯಿತು.

ಋಷಿಗಳು ಧರ್ಮಚರ್ಚೆ ಮಾಡುವುದರಲ್ಲಿ ಮಾತ್ರವಲ್ಲ. ಸಂದರ್ಭ ಬಂದರೆ ಯುದ್ಧವನ್ನೂ ಮಾಡುತ್ತಿದ್ದರು. ಕೇವಲ ಯುದ್ಧ ಮಾಡುವುದಲ್ಲದೆ ಶತ್ರುಗಳನ್ನು ಸೋಲಿಸಲು ಬಲ್ಲವರಾಗಿದ್ದರು. ಯುದ್ಧ ವಿದ್ಯೆಯ ಶಿಕ್ಷಣವನ್ನು ಅವರೇ ಕೊಡುತ್ತಿದ್ದರಲ್ಲವೇ?

ಸಮಾಜದಲ್ಲಿ ಯಾವುದೇ ಒಂದು ಜಾತಿಯ ಪ್ರಾಬಲ್ಯ ಅಧಿಕಾರ ನಡೆಯಬಾರದು. ಸರ್ವರಿಗೂ ಸಮಾನ ಅವಕಾಶ ಬೇಕು ತಾನೇ? ಎಲ್ಲ ಜಾತಿಗಳೂ ತಮ್ಮ ತಮ್ಮ ಕೆಲಸವನ್ನು ಮಾಡಬೇಕು. ಎಲ್ಲಕ್ಕಿಂತ ಮೊದಲು ಮನುಷ್ಯ ಧರ್ಮ. ಆಮೇಲೆ ಜಾತಿ, ಮತಗಳು. ★

(ವಿವಿಧ ಮೂಲಗಳಿಂದ)

### ಋಗ್ವೇದ

ಮೂಲ–ತೆಲುಗು ವ್ಯಾಖ್ಯಾನ.

ಸಂಪುಟ ಒಂದು ಹಾಗೂ ಎರಡು ಬಿಡುಗಡೆಯಾಗಿವೆ. ತಿ. ತಿ. ದೇ. ಸಮಾಚಾರ ಕೇಂದ್ರಗಳಲೆಲ್ಲ ಪ್ರತಿಗಳು ದೊರೆಯುತ್ತವೆ. ಪ್ರತಿಸಂಪುಟದ ಬೆಲೆ ರೂ 100 ಮಾತ್ರ.

ಕೂಡಲೇ ನಿಮ್ಮ ಬಳಿಯ ತಿ. ತಿ. ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

## ಕರ್ನಾಟಕ ರಾಜ್ಯೋತ್ಸವ ಸನ್ಮಾನಗಳು.

ಕರ್ನಾಟಕ ಸರಕಾರವು ರಾಜ್ಯೋತ್ಸವ ಸನ್ಮಾನಗಳಿಗಾಗಿ 25 ಮಂದಿ ಹಿರಿಯರಿಗೆ ಅವರು ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸಿದ ಸೇವೆಯ ಪ್ರತಿಯಾಗಿ 5000 ರೂ ನಗದು ಬಹುಮಾನ, ರಜತ ಫಲಕ, ಗಳಿಂದ ಸನ್ಮಾನಿಸಲು ತೀರ್ಮಾನಿಸಿದೆ. ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ, ಸಲ್ಲಿಸುತ್ತಿರುವವರಲ್ಲಿ 47 ಮಂದಿಗೆ ರೂ 500 ಗಳ ಮಾಸಿಕ ಗೌರವ ವೇತನವನ್ನೂ 111 ಮಂದಿಗೆ 250 ರೂಗಳ ಮಾಸಿಕ ಗೌರವ ವೇತನವನ್ನು ಪ್ರಕಟಿಸಿದೆ.

5000 ರೂಗಳ ನಗದು ಹಾಗೂ ರಜತ ಫಲಕಗಳ ಸನ್ಮಾನ ಪಡೆದವರಲ್ಲಿ ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ಡಾ॥ ಹಾ. ಮಾ. ನಾಯಕ, ಪತ್ರಕರ್ತ ಶ್ರೀ ಅಗರಂ ರಂಗಯ್ಯ, ಸಂಗೀತಗಾರ ಶ್ರೀ ಕುಮಾರಗಂಧರ್ವ, ಶಿಲ್ಪಿ ಶ್ರೀ ಬಿ. ಬಸವಣ್ಣ, ಸಂಗೀತ ನಿರ್ದೇಶಕ ಬಿಡ್ಡು ಅಪ್ಪಯ್ಯ ಅವರುಗಳಿದ್ದಾರೆ.

500 ರೂಗಳ ಮಾಸಿಕ ಗೌರವ ವೇತನ ಪಡೆದವರಲ್ಲಿ ಹಲವರೆಂದರೆ ಸರ್ವಶ್ರೀ ಆರ್. ಆರ್. ದಿವಾಕರ್, ಬಿ. ಎಂ. ಇದಿನಬ್ಬ, ಕೆಳದಿ ಗುಂಡಾ ಜೋಯಿಸ್, ಎಚ್. ಎಂ. ಶಂಕರನಾರಾಯಣ ರಾವ್, ಟಿ. ಕೆ. ರಾಮರಾವ್, ಡಾ॥ ವಿ. ಎಂ. ಇನಾಂದಾರ್, ದಾಶರಥಿ ದೀಕ್ಷಿತ್, (ಕನ್ನಡ) ಕೆ ಎಸ್. ನಾಗರಾಜನ್, ಎನ್. ರಂಗನಾಥ ಶರ್ಮ, ಡಾ॥ ಕೆ ಕೃಷ್ಣಮೂರ್ತಿ, ಪ್ರೊ. ಎಸ್ ಕೆ. ರಾಮಚಂದ್ರರಾವ್, (ಸಂಸ್ಕೃತ) ಮಧುಗಿರಿ ರಾಮು, ಉದಯಕುಮಾರ್, ಮತಿ ಘಟ್ಟ ಕೃಷ್ಣಮೂರ್ತಿ, ಮೊದಲಾದವರು.

250 ರೂಗಳ ಮಾಸಿಕ ಗೌರವ ವೇತನ ಪಡೆದವರಲ್ಲಿ ಹಲವರೆಂದರೆ ಸರ್ವಶ್ರೀ ಕೆ. ಟಿ. ರಾಮಸ್ವಾಮಿ ಅಯ್ಯಂಗಾರ್, ಸೂರ್ಯನಾರಾಯಣ ಚಡಗ, ಸತ್ಯಕಾಮ, ಆದ್ಯರಾಮಾಚಾರ್ಯ, ಅರ್ಚಕ ರಾಮಾಚಾರ್ಯ, ಶ್ರೀಮತಿ ಎಂ. ಎಸ್. ಸಿಂಗಾರಮ್ಮ, ಟಿ. ಆರ್. ಗಂಗಾಧರನ್, ರಾಮನರಸಯ್ಯ, ಜಗನ್ನಾಥರಾವ್ ಪಡಕಿ, ಸಿ. ವಿ. ನಾಗರಾಜು ಮೊದಲಾದವರು.

# ಕರ್ನಾಟಕದಲ್ಲಿ

## ಚಿಂತಾಮಣಿಯಲ್ಲಿ ಕ್ಷಿಣ ಜೋಡಿ ವಿವಾಹ.

ವಿಶಾಲವಾದ ಚಪ್ಪರ, ಸದಾ ತುಂಬಿದ ವಾಹನ ಸಂಚಾರವಿರುವ ರಸ್ತೆಗೆ ಜನಸಾಗರದ ಅಡ್ಡಿ ಕಾರಣ ವಾಹನಗಳು ಬೇರೆ ರಸ್ತೆ ಮೂಲಕ ಪ್ರಯಾಣ, ಭವ್ಯವಾದ ತಲೆ ಎತ್ತಿ ನೋಡುವಷ್ಟು ಉದ್ದಗಲದ ಮೈದಾನದಲ್ಲಿ 385 ವಧೂವರರ ಜೋಡಿ ಸಾಲುಗಳು, ಬಿಳಿ ಪಂಚೆ, ಷರಟು, ಪೇಟ ತೊಟ್ಟ ಮದುಮಗನ ಪಕ್ಕ ಬಿಳಿ ಸೀರೆ ರವಿಕೆ ತೊಟ್ಟು ಬಾಸಿಂಗ ಕಟ್ಟಿಕೊಂಡು ಕೈಯಲ್ಲಿ ಮುಂದಿನ ದಾಂಪತ್ಯ ಜೀವನಕ್ಕೆ ಅಗತ್ಯವಾದ ತಟ್ಟೆ, ಚೆಂಬು ಹಿಡಿದು ಕೂತ ಮದುವಣಗಿತ್ತಿ. ಸುತ್ತಲೂ ಬಂಧುಗಳು, ಆಪ್ತರ ಸಮೂಹ. ಜೊತೆಗೆ ಈ ಒಂದು ವಿಶೇಷ ಸಂದರ್ಭವನ್ನು ವೀಕ್ಷಿಸಿ ಜನ್ಮ ಪಾವನ ಮಾಡಿಕೊಳ್ಳಲು ಸೇರಿದ್ದ ಜನಸ್ತೋಮ.

ಈ ರೀತಿ ಚರಿತ್ರಾರ್ಹ, ಸ್ಮರಣೀಯ ದೃಶ್ಯ ಇಲ್ಲಿ ಸಮೀಪದ ಬೂರಗಮಾಕಲಹಳ್ಳಿ ದೊರ ಶೆಟ್ಟಿ ವಕ್ಕರಿ ಶ್ರೀ ವೀರಾಂಜನೇಯ ದೇವಾಲಯದ ಆವರಣದಲ್ಲಿ ಸಹಸ್ರಾರು ಕಣ್ಣುಗಳು ವೀಕ್ಷಿಸಿ ಆನಂದ ಬಾಷ್ಪ ಸುರಿಸಿದವು. ಮನದಲ್ಲೇ ನೂತನ ವಧೂವರರನ್ನು ಹರಸಿದವು.

ಅಕ್ಟೋಬರ್ ಮೂವತ್ತರಂದು ಬೆಳಗ್ಗೆ 10-30 ರ ವೇಳೆಗೆ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ಶ್ರೀ ಶ್ರೀ ವೀರೇಂದ್ರಹೆಗ್ಗಡೆಯವರು ಶ್ರೀ ಮಂಜುನಾಥನ ಪರವಾಗಿ ಆಗಮಿಸಿ ನೂತನ ವಧುಗಳಿಗೆ ಬಂಗಾರದ ಮಾಂಗಲ್ಯ ವಿತರಿಸಿದರು. ಪುರೋಹಿತರು ಮಂತ್ರೋಚ್ಚಾರ ಆರಂಭಿಸಿ ಮಂತ್ರ ಪಠಿಸುತ್ತಿದ್ದಂತೆ ಶುಭ ಮುಹೂರ್ತದಲ್ಲಿ 385 ಜೊತೆ ದಂಪತಿಗಳು ಗೃಹಸ್ಥಧರ್ಮದ ವಚನ ಪಡೆದರು.

ನೂತನ ವಧೂವರರು, ಹಾಗೂ ಅಪಾರ ಜನಸ್ತೋಮವನ್ನುದ್ದೇಶಿಸಿ ಮಾತನಾಡಿದ ವೀರೇಂದ್ರರು ಈ 'ರೀತಿ 385 ಜೊತೆ ಸಾಮೂಹಿಕ ವಿವಾಹದ ಸಂದರ್ಭದಲ್ಲಿ ಇಡೀ ಕರ್ನಾಟಕದ ಇತಿಹಾಸದಲ್ಲಿ ಇದು ಎರಡನೆಯದಾಗಿದೆ ಹಿಂದೇ ಒಮ್ಮೆ ಧರ್ಮಸ್ಥಳದಲ್ಲಿ ಸುಮಾರು 475 ವಿವಾಹಗಳಾಗಿತ್ತು ವತ್ತೆ ಇಂದಿನ ಈ ವಿವಾಹವೇ ಹೆಚ್ಚಿನದಾಗಿದೆ. ಈ ಹಿರಿಮೆ ಚಿಂತಾಮಣಿಗಳಿಸಿದೆ' ಎಂದರು.

ಸಹಸ್ರಾರು ಮಂದಿಯ ಆಶೀರ್ವಾದ ಪಡೆಯುವ ಈ ವಧೂವರರು ನಿಜಕ್ಕೂ ಅದೃಷ್ಟಶಾಲಿಗಳು. ಈ ನೂತನ ದಂಪತಿಗಳ ಜೀವನ ಸುಗಮವಾಗಲು ಇವರು ಉತ್ತಮ ಮಾರ್ಗದಲ್ಲಿ ನಡೆಯಬೇಕು, ಕುಡಿತ ಮತ್ತಿತರ ದುರಭ್ಯಾಸಗಳಿಂದ ದೂರವಿರಬೇಕು ಎಂದು ಹಿತನುಡಿ ಇತ್ತರು.

ಭಾರತದ ಎರಡೂವರೆ ಸಹಸ್ರ ವರ್ಷಗಳ ಭವ್ಯ ಪರಂಪರೆಯಲ್ಲಿ ವಿವಾಹಕ್ಕೆ ಬಹಳಷ್ಟು ಮಹತ್ವವಿದೆ, ಇದು ಪುಣ್ಯದ ಕಾರ್ಯವೆಂಬ ನಂಬಿಕೆ ಇದೆ,



ಸಾಮೂಹಿಕ ವಿವಾಹಗಳ ಒಂದು ನೋಟ

## ನಿಧನ

### ಆನಂದಕಂದ :

ಆನಂದ ಕಂದ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಸಾಹಿತಿ, ವಿದ್ವಾಂಸ ಡಾ॥ ಬೆಟಗೇರಿ ಕೃಷ್ಣಶರ್ಮರು ಧಾರವಾಡದಲ್ಲಿ ಅಕ್ಟೋಬರ್ 30 ರಂದು ದೈವಾಧೀನರಾದರು.

ಕನ್ನಡದ ಲೇಖಕರಲ್ಲಿ ಹಿರಿಯ ತಲೆಮಾರಿಗೆ ಸಂದ ಡಾ॥ ಬೆಟಗೇರಿ ಅವರು ಕನ್ನಡ ಸಾಹಿತ್ಯದಲ್ಲಿ ವಿಶೇಷವಾಗಿ ಆಸಕ್ತಿ ವಹಿಸಿದ ಸಂಸ್ಕೃತ ವಿದ್ವಾಂಸರು. ಜನಪದ ಸಾಹಿತ್ಯ, ದಾಸ ಸಾಹಿತ್ಯದ ಅಸಂಖ್ಯ ಕೃತಿಗಳನ್ನು ಸಂಪಾದಿಸಿ ಬಹುಶ್ಲಾಘ್ಯ ರೀತಿಯ ಸಂಗ್ರಹಗಳಲ್ಲಿ ಪ್ರಕಟಿಸಿದರು. 1900 ರಲ್ಲಿ ಹುಟ್ಟಿದ ಡಾ॥ ಬೆಟಗೇರಿ ಅವರು ಕನ್ನಡದಲ್ಲಿ ಮಕ್ಕಳಿಗಾಗಿ ಬರೆದ ಮೊದಲಿಗರಲ್ಲಿ ಒಬ್ಬರಾಗಿದ್ದರು ಕವನ, ನಾಟಕ, ಕಾದಂಬರಿಗಳನ್ನೂ ರಚಿಸಿರುವರು.

### ಆರ್. ಎಸ್. ಪಂಚಮುಖಿ :

ಕನ್ನಡ ಸಾಹಿತ್ಯದ ಉತ್ತುಂಗ ವಿದ್ವಾಂಸರೂ, ಇತಿಹಾಸಕಾರರೂ ಸಂಶೋಧಕರೂ ಆಗಿದ್ದ ಆರ್. ಎಸ್ ಪಂಚಮುಖಿ ಅವರು 4–10–82 ರಂದು ನಿಧನರಾದರು.

85 ವರ್ಷ ವಯೋಮಾನದ ಶ್ರೀ ಪಂಚಮುಖಿ ಅವರು ಹರಿದಾಸ ಸಾಹಿತ್ಯದಲ್ಲಿ ಉತ್ತಮವಾದ ಸಂಶೋಧನೆಯನ್ನು ನಡೆಸಿದ್ದರು. ಧಾರವಾಡದ ಕನ್ನಡ ಸಂಶೋಧನಾಲಯದ ನಿರ್ದೇಶಕರಾಗಿ ಕರ್ನಾಟಕ ಇತಿಹಾಸ ಸಂಶೋಧನಾಲಯದ ಅಧ್ಯಕ್ಷರಾಗಿ 20 ಕ್ಕೂ ಮಿಕ್ಕಿದ ವಿದ್ವತ್ಕೃತಿಗಳನ್ನೂ, ಹಲವಾರು ಲೇಖನಗಳನ್ನೂ ರಚಿಸಿದ್ದರು.

ಒಂದೇ ತಿಂಗಳಿನಲ್ಲಿ ಹೀಗೆ ಇಬ್ಬರು ಹಿರಿಯ ಧರ್ಮ ಸಂಶೋಧಕರು ನಿಧನರಾಗಿರುವುದರಿಂದಾಗಿ ಉಂಟಾದ ಈ ಶೂನ್ಯವನ್ನು ತುಂಬಲು ಬಹುಕಷ್ಟವೆಂದು ಅಭಿಪ್ರಾಯ ಪಡಲಾಗಿದೆ.

ಮಾನವ ಜನಾಂಗಕ್ಕೆ ಉತ್ತಮ ಕಾರ್ಯಗಳನ್ನು ನೂತನ ಶಕ್ತಿ ನಡೆಸು ಬೇಕು. ಉತ್ತಮ ಸಂಸ್ಕಾರ, ಸಂಸ್ಕೃತಿ ಇದ್ದವರಿಂದಿಗೆ ಈ ರೀತಿ ಪುಣ್ಯ ಕಾರ್ಯಗಳಿಗೆ ಅವಕಾಶವೇ ದೊರೆಯು ದೆಂದರು.

ಕರ್ನಾಟಕ ರಾಜ್ಯ ಅರ್ಥಿಕ ಶಾಖಾ ಸಚಿವ ವೀರಪ್ಪ ಮೊಯ್ಲಿಯವರು ಭವ್ಯ ಶ್ರೀ ಸೀತಾರಾಮ ಕಲ್ಯಾಣ ಮಂಟಪವನ್ನು ಉದ್ಘಾಟಿಸಿ ಸಮಾಜದ ಅಸಮಾನತೆ, ವರದಕ್ಷಿಣೆ ಪಿಡುಗು ಹೋಗಲಾಡಿಸಲು ಈ ಸಾಮೂಹಿಕ ವಿವಾಹ ಪದ್ಧತಿ ತುಂಬಾ ಉಪಯುಕ್ತ. ಈ ಕಲ್ಯಾಣ ಮಂಟಪ ಉದ್ಘಾಟನಾ ಸಮಯದಲ್ಲಿ ಈ ರೀತಿ ಪವಿತ್ರ ಕಾರ್ಯ ನಡೆಯುತ್ತಿರುವುದು ತುಂಬಾ ಸಂತಸದ ಸಂಗತಿ, ಎಂದಲ್ಲದೆ ಈ ಕಾರ್ಯಕ್ರಮದ ವ್ಯವಸ್ಥಾಪಕರನ್ನು ಅಭಿನಂದಿಸಿದರು.

ಈ ಸಾಮೂಹಿಕ ವಿವಾಹಗಳು ಜಾತ್ಯಾತೀತತೆಯ ಸಂಕೇತವೆಂದ ಸಚಿವರು ಇದೊಂದು ಸಮುದಾಯದ ಪ್ರಜ್ಞಾವಂತ ಕೆಲಸವೆಂದು ಶ್ಲಾಘಿಸಿ, ಗ್ರಾಮದ ಪರಿಸರದಲ್ಲೊಂದರಲ್ಲಿ ಈ ರೀತಿ ಭವ್ಯ, ಸುಂದರವಾಗಿ ನಿರ್ಮಿಸಿರುವ ಕಲ್ಯಾಣ ಮಂಟಪ ಉತ್ತಮ ಕಾರ್ಯಗಳಿಗೆ ಬಳಕೆಯಾಗಿ ಇಲ್ಲಿನ ಜನತೆಗೆ ಹೊಸ ಹುರುಪು ಪ್ರಸನ್ನತೆ, ಧೈರ್ಯ ಸ್ಥೈರ್ಯ ತರಲೆಂದರು.

ಸಂಸತ್ ಸದಸ್ಯ ಜಿ. ವೈ. ಕೃಷ್ಣನ್ ರವರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಟ್ರಸ್ಟಿನ ಅಧ್ಯಕ್ಷ ಬಿ. ಚೊಕ್ಕರೆಡ್ಡಿ ಸ್ವಾಗತಿಸಿದರು. ಟ್ರಸ್ಟಿನ ಸದಸ್ಯ ಊಲವಾಡಿ ವಿ. ನಾರಾಯಣರೆಡ್ಡಿ ಸ್ಮರಣ ಸಂಚಿಕೆ ಬಿಡುಗಡೆ ಮಾಡಿದರು.

ಕೃಪೆ: ಕೋಲಾರವಾಣಿ.

---

## ತಿರುಮಲೆಯಲ್ಲಿ ಮಹಾರಾಷ್ಟ್ರ ಸರ್ಕಾರದ ಅತಿಥಿ ಗೃಹ

ಮಹಾರಾಷ್ಟ್ರ ಸರಕಾರವು ತಿರುಮಲೆಯಲ್ಲಿ ತಮ್ಮದೇ ಆದ ಅತಿಥಿ ಗೃಹ ನಿರ್ಮಾಣ ಮಾಡಲು ಉದ್ದೇಶಿಸಿದ್ದು ತಕ್ಕ ಸ್ಥಳವನ್ನು ತೋರಿಸಿ ಅಗತ್ಯವಾದ ವಿವರಗಳನ್ನು ನೀಡಲು ತಿ ತಿ ದೇವಸ್ಥಾನಗಳನ್ನು ಕೇಳಿದ್ದು; ತಿ. ತಿ ದೇ. ಮಹಾರಾಷ್ಟ್ರ ಸರ್ಕಾರದ ಬೇಡಿಕೆಯನ್ನು ಮನ್ನಿಸಿದೆ. ಅದರಂತೆ ತಿ. ತಿ. ದೇ. ತಿರುಮಲೆಯಲ್ಲಿ ಮಹಾರಾಷ್ಟ್ರದ ಸರ್ಕಾರೀ ಅತಿಥಿ ಗೃಹಕ್ಕೆ ತಕ್ಕ ಸ್ಥಳವನ್ನು ನೀಡಲು ನಿರ್ಣಯಿಸಿದೆ.

## ಮೂತ್ರ ಪಿಂಡಗಳ ಬದಲಾವಣೆ ವಿಶೇಷ ನೆರವು

ತಿ.ತಿ ದೇ ಆಡಳಿತ ನಿರ್ವಾಹಕ ಮಂಡಳಿ 'ಜನಸೇವೆಯೇ ಜನಾರ್ದನ ಸೇವೆ' ಎಂಬ ತತ್ತ್ವದ ಆಧಾರದ ಮೇಲೆ ಮಾನವೀಯ ಅನುಕಂಪದ ನೆಲೆಯಿನ ಮತ್ತೊಂದು ಹೆಜ್ಜೆ ಮುಂದೆ ಇಟ್ಟಿದೆ. ಮೂತ್ರ ಪಿಂಡಗಳ ಬದಲಾವಣೆಯ ಶಸ್ತ್ರಚಿಕಿತ್ಸೆಗಳಲ್ಲಿ ಅಗತ್ಯವಾದ ಮಟ್ಟಿಗೆ ಐದು ಸಾವಿರ ರೂಗಳ ಆರ್ಥಿಕ ನೆರವು ನೀಡುವುದೇ ಈ ಹೆಜ್ಜೆಯಾಗಿದೆ ಇನ್ನು ಮುಂದೆ ಇಂತಹ ಆರ್ಥಿಕ ನೆರವು ನೀಡುವುದಕ್ಕಾಗಿ ವಾರ್ಷಿಕ ಮುಂಗಡವನ್ನು ತೆಗೆದಿಡಬೇಕೆಂದೂ ಮಂಡಲಿ ತೀರ್ಮಾನಿಸಿದೆ.

(3ನೇ ಪುಟದಿಂದ)

ಣಗಳನ್ನೂ ಅವರೇ ಹೊಂದಿಸಿ ಕೊಡಬೇಕೆಂಬ ಶರತ್ತಿನ ಮೇಲೆ ಒಪ್ಪಲಾಯಿತು.

* * * *

ಗರುಡಾದ್ರಿ ನಗರದ ಬಳಿಯಲ್ಲಿ ವಿಶೇಷರೀತಿಯ ಹೊಸ ಯಾತ್ರಿಕ ವಸತಿ ಗೃಹಗಳ ದಾನ ಯೋಜನೆಯಂತೆ ಪ್ರತಿ ಕೊಠಡಿಗೂ 30,000 – ರೂಗಳ ದಾನವನ್ನು ಸ್ವೀಕರಿಸುವ ಹೊಸ ಯೋಜನೆಯನ್ನು ಅಂಗೀಕರಿಸಲಾಯಿತು.

* * * *

ಮಹಾರಾಷ್ಟ್ರದ ಸರ್ಕಾರದ ವತಿಯಿಂದ ಮಹಾರಾಷ್ಟ್ರ ರಾಜ್ಯ ಅತಿಥಿಗೃಹ ನಿರ್ಮಾಣದ ಯೋಜನೆಯನ್ನು ಅಂಗೀಕರಿಸಲಾಯಿತು. ★

## ಯಶಸ್ವಿ ಬ್ರಹ್ಮೋತ್ಸವಗಳು

ತಿರುಮಲೆಯಲ್ಲಿ ಈ ಬಾರಿ ಎರಡು ಬ್ರಹ್ಮೋತ್ಸವಗಳು ಯಶಸ್ವಿಯಾಗಿ ನಡೆದುವು. ಮೊದಲ ಬ್ರಹ್ಮೋತ್ಸವ ಸೆಪ್ಟೆಂಬರ್ 20 ರಿಂದ 28ರ ವರೆಗೆ ಹಾಗೂ ಎರಡನೆಯ ಬ್ರಹ್ಮೋತ್ಸವ ಅಕ್ಟೋಬರ್ 15 ರಿಂದ 25 ರ ವರೆಗೂ ನಡೆದುವು ಅನಿರೀಕ್ಷಿತವೆಂತಹ ಪ್ರಕೃತಿಯ ವೈಪರೀತ್ಯಗಳಿದ್ದರೂ ಅಪಾರ ಸಂಖ್ಯೆಯಲ್ಲಿ ಭಕ್ತಜನ ತಿರುಮಲೆಗೆ ಆಗಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯ ಬ್ರಹ್ಮೋತ್ಸವಗಳಲ್ಲಿ ಪಾಲುಗೊಂಡರು. ಎರಡೂ ಬ್ರಹ್ಮೋತ್ಸವಗಳಲ್ಲಿನ ಯಾತ್ರಿಕ ಸಮುದಾಯವನ್ನು ಗಮನದಲ್ಲಿರಿಸಿಕೊಂಡು ತಿ. ತಿ ದೇ. ಯಾತ್ರಿಕ ಸೌಲಭ್ಯಗಳಿಗಾಗಿ ವಿಶೇಷ ಏರ್ಪಾಡುಗಳನ್ನು ಮಾಡಿದ್ದವು.

ತಿರುಮಲೆಯಲ್ಲಿನ ಉಚಿತ ವಸತಿಯ ಪರಿಮಿತಿಯನ್ನು ನಿವಾರಿಸಲು 20 ಭಾರೀ ತಾತ್ಕಾಲಿಕ ವಸತಿಯ ಷೆಡ್‌ಗಳನ್ನು ಏರ್ಪಾಡು ಮಾಡಲಾಗಿದೆ. ಪ್ರತಿ ಸಂಜೆಯಲ್ಲಿ ನಡೆದ ಶ್ರೀ ವೆಂಕಟೇಶ್ವರ ಸ್ವಾಮಿಯವರ ಊಂಜಲ್ ಸೇವೆ ಹಾಗೂ ಅರ್ಜಿತಸದಸ್ಸಿನ ಸಂಗೀತ ಹರಿಕಥಾಕಾರ್ಯಕ್ರಮಗಳನ್ನು ದೇವಾಲಯದ ಸುತ್ತಲೂ, ಕ್ಯೂಷೆಡ್‌ಗಳಲ್ಲೂ ಟಿ. ವಿ. ಯ ಮೂಲಕ ಪ್ರಸಾರ ಮಾಡಲಾಗುತ್ತಿತ್ತು ಮೊದಲನೆಯ ಬ್ರಹ್ಮೋತ್ಸವದಲ್ಲಿ ಪುಷ್ಪಪ್ರದರ್ಶನವನ್ನು ಏರ್ಪಾಡು ಮಾಡಲಾಗಿದ್ದಿತು. ಆಂಧ್ರಪ್ರದೇಶದ ಹೊಸ ಮುಖ್ಯಮಂತ್ರಿ ಶ್ರೀ ಕೆ. ವಿಜಯಭಾಸ್ಕರರೆಡ್ಡಿ ಮುಂತಾದ ಹಿರಿಯರು ಮೊದಲ ಬ್ರಹ್ಮೋತ್ಸವದಲ್ಲಿ ಭಾಗವಹಿಸಿದ್ದರು. ಗರುಡೋತ್ಸವದ ದಿನ ಮಾತ್ರವೇ ಸುಮಾರು 50 ಸಾವಿರ ಮಂದಿ ಯಾತ್ರಿಕರು ತಿರುಮಲೆಯಲ್ಲಿ ಸೇರಿ ಗೋವಿಂದ ನಾಮಸ್ಮರಣೆ ಮಾಡಿದ್ದರು. ತಿ.ತಿ.ದೇ. ಆಸ್ಥಾನ ವಿದ್ವಾಂಸರು ಶ್ರೀ ಚಿಟ್ಟಿಬಾಬು (ವೀಣೆ) ಶ್ರೀ ಮಹಾರಾಜಪುರಂ ಸಂತಾನಂ (ಗಾತ್ರ) ಶ್ರೀಮತಿ ಮಣಿಕೃಷ್ಣಸ್ವಾಮಿ (ಗಾತ್ರ) ಹಾಗೂ ಶ್ರೀ ಎಸ್. ರಾಜೇಶ್ವರರಾವ್, ಶ್ರೀ ಬಾಲಕೃಷ್ಣಪ್ರಸಾದ್ ಇವರುಗಳ ಸಂಗೀತ ಕಾರ್ಯಕ್ರಮಗಳೂ, ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿ, ಶ್ರೀ ಎಂ. ರಂಗಾಚಾರ್ಯುಲು ಮೊದಲಾದವರ ಉಪನ್ಯಾಸಗಳೂ ಏರ್ಪಾಡಾಗಿದ್ದವು.

ಎರಡನೆಯ ಬ್ರಹ್ಮೋತ್ಸವದಲ್ಲಿಯೂ ಮೊದಲ ಬ್ರಹ್ಮೋತ್ಸವದಲ್ಲಿಯಂತೆಯೇ ಸಂಗೀತೋಪನ್ಯಾಸ ಹರಿಕಥಾ ಕಾರ್ಯಕ್ರಮಗಳು ನಡೆದವು. ಶ್ರೀ ಅರ್ಕಸೋಮಯಾಜಿ, ಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ಮೊದಲಾದವರ ಉಪನ್ಯಾಸಗಳೂ, ಶ್ರೀ ವಂಗಲ ಪಟ್ಟಾಭಿ, ಶ್ರೀ ಚಿಂತಾಶಿವರಾಮ ಶಾಸ್ತ್ರಿ ಮೊದಲಾದವರ ಹರಿಕಥೆಗಳೂ, ಅಕ್ಟೋಬರ್ 19ರಂದು ಶ್ರೀ ಲಾಲ್‌ಗುಡಿ ಜಯರಾಮನ್ (ವಯೋಲಿನ್), 21 ರಂದು ಕುಮಾರಿ ಆರ್. ಜಿ ಶೋಭಾರಾಜು (ಗಾತ್ರ), 25 ರಂದು ತಿ.ತಿ ದೇ ಆಸ್ಥಾನ ವಿದ್ವಾಂಸ ಶ್ರೀ ಬಾಲಮುರಳೀ ಕೃಷ್ಣ (ಗಾತ್ರ) ಅವರುಗಳ ಸಂಗೀತ ಕಚೇರಿಗಳೂ ನಡೆದುವು.



↑

ಬ್ರಹ್ಮೋತ್ಸವದಲ್ಲಿ ಭಾಗವಹಿಸಿದ ಆಂಧ್ರ ಪ್ರದೇಶದ ದೇವಾದಾಯ ಇಲಾಖಾ ಮಂತ್ರಿ ಶ್ರೀ ಜಿ. ನಾಗೇಶ್ವರರಾವ್ ಅವರೊಡನೆ ಶ್ರೀ ಜಿ ಕುಮಾರಸ್ವಾಮಿರೆಡ್ಡಿ ಅವರು ಉತ್ಸವಮೂರ್ತಿಗೆ ಗೌರವವನ್ನರ್ಪಿಸುತ್ತಿರುವಾಗ ತೆಗೆದ ಚಿತ್ರ.

ಈ ಬಾರಿಯ ಬ್ರಹ್ಮೋತ್ಸವಗಳಲ್ಲಿ ಹೆಚ್ಚಿನಂತೆ ಕಂಡುಬಂದ ಮತ್ತೊಂದು ಅಂಶವೆಂದರೆ ಶುಚಿತತೆ ಹಾಗೂ ಶಿಸ್ತು. ಯಾತ್ರಿಕ ಸೌಕರ್ಯಗಳನ್ನು ಹೆಚ್ಚು ಚೆನ್ನಾದ ರೀತಿಯಲ್ಲಿ ನೋಡಿಕೊಂಡ ತಿ ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಹಾಗೂ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಅವರುಗಳು ಈ ದಿಸೆಯಲ್ಲಿ ಶ್ಲಾಘ್ಯವಾದ ಕೆಲಸಮಾಡಿದ್ದರು

ನವರಾತ್ರಿ ಬ್ರಹ್ಮೋತ್ಸವಗಳಲ್ಲಿ ಅಕ್ಟೋಬರ್ 21ರಂದು ನಡೆದ ಸಂಗೀತ ಕಚೇರಿಯಲ್ಲಿ ಕುಮಾರಿ ಆರ್. ಜಿ. ಶೋಭಾರಾಜು ಮತ್ತು ಸಂಗಡಿಗರು

↓



## ಮುಂದಿನ ಸಂಚಿಕೆಯಲ್ಲಿ

ಸಪ್ತಗಿರಿ — ಜನವರಿ 1983

**ದೇವಾಲಯಗಳು ಹಾಗೂ ಸಂಸ್ಕೃತಿ** — ಡಾ॥ ಎನ್ ಅನಂತರಂಗಾಚಾರ್

**ಆನಂದ ಕಂದ** — ಡಾ॥ ವಸಂತಕುಷ್ಟಗಿ

**ದಾಸ ಸಾಹಿತ್ಯದಲ್ಲಿ ದ್ವೈತ** — ಡಾ॥ ಕೆ. ಎಂ. ಕೃಷ್ಣರಾವ್

**ಗೋವಿಂದರಾಮಾಯಣದ ಶ್ರೀರಾಮ** — ವಿದ್ವಾನ್ ಬಾಲಗಣಪತಿ ಭಟ್ಟ

**ದಾಸ ಸಾಹಿತ್ಯದಲ್ಲಿ ಶೃಂಗಾರ** — ಪ್ರಹ್ಲಾದರಾವ್ ಜೋಷಿ

**ಹರಿಹರೇಶ್ವರ** — ಎ. ಪಂಕಜ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

## 1983
## ಜನವರಿ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 11. | ಮಂಗಳವಾರ | ತೊಂಡರಡಿಪ್ಪೊಡಿ ಆಳ್ವಾರ್ ವರ್ಷ ತಿರುನಕ್ಷತ್ರ |
| 13. | ಗುರುವಾರ | ಭೋಗಿ ಹಬ್ಬ |
| 14. | ಶುಕ್ರವಾರ | ಮಕರ ಸಂಕ್ರಾಂತಿ |
| 15. | ಶನಿವಾರ | ಕನೂ ಹಬ್ಬ, ದನಗಳ ಜಾತ್ರೆ |
| 21. | ಶುಕ್ರವಾರ | ರಥಸಪ್ತಮಿ |
| 23. | ಭಾನುವಾರ | ಮಧ್ವನವಮಿ |
| 24. | ಸೋಮವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಪ್ರಾರಂಭ |
| 26. | ಬುಧವಾರ | ಭಾರತೀಯ ಗಣರಾಜ್ಯ ದಿನೋತ್ಸವ |
| | | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 30. | ಭಾನುವಾರ | ತಿರುಮೊಳಿಶೈ ಆಳ್ವಾರ್ ವರ್ಷ ತಿರುನಕ್ಷತ್ರ |

## ವಿನೋಬಾ ಭಾವೆ ನಿರ್ಗಮನ

ಮಹಾತ್ಮಾ ಗಾಂಧಿಯವರ ಆಧ್ಯಾತ್ಮಿಕ ಶಿಷ್ಯರೂ, ಉತ್ತರಾಧಿಕಾರಿಗಳೂ ಆಗಿ ಸರ್ವೋದಯ, ಭೂದಾನ, ಗೋಸಂರಕ್ಷಣೆಯ ಪ್ರಮುಖ ನೇತಾರರೂ ಆದ ಸಂತ ಶ್ರೇಷ್ಠ ವಿನೋಬಾ ಭಾವೆ ಅವರು ಇದೇ ನವಂಬರ್ 15 ರಂದು ಇಹಲೋಕದಿಂದ ನಿರ್ಗಮಿಸಿದರು.

1895 ಸೆಪ್ಟಂಬರ್ 11 ರಂದು ಹುಟ್ಟಿದ ವಿನಾಯಕ ನರಹರಿಭಾವೆ ಅವರು ಸಂಸ್ಕೃತ ತಮಿಳು, ಪರ್ಶಿಯನ್ ಭಾಷೆಗಳಲ್ಲಿ ವಿಶೇಷ ಅಧ್ಯಯನ ನಡೆಸಿ 1932 ರಲ್ಲಿ ಅಸಹಕಾರ ಆಂದೋಳನದಲ್ಲಿ ಭಾಗವಹಿಸಿ ಬಂಧಿತರಾದರು. 1942 ರ ಕ್ವಿಟ್ ಇಂಡಿಯಾ ಸತ್ಯಾಗ್ರಹದಲ್ಲೂ ಬಂಧಿತರಾಗಿದ್ದರು.

1951 ರಲ್ಲಿ ಆಂಧ್ರಪ್ರದೇಶದ ತೆಲಂಗಾಣದ ಪೋಚಂಪಲ್ಲಿಯ ಹರಿಜನರಿಗಾಗಿ ಭೂದಾನ ಯಜ್ಞವನ್ನು ಆರಂಭಿಸಿದರು. 51 ದಿನಗಳ ಆರಂಭದ ಭೂದಾನಯಜ್ಞದಲ್ಲಿ 200 ಹಳ್ಳಿಗಳನ್ನು ಸಂದರ್ಶಿಸಿ 12200 ಎಕರೆ ಭೂದಾನ ಪಡೆದು ಹಂಚಿದರು. 18 ವರ್ಷದ ಈ ಪಾದಯಾತ್ರೆಯಲ್ಲಿಯೇ ಅವರು ಮಧ್ಯಪ್ರದೇಶದ ಚಂಬಲ್ ಕಣಿವೆಯ ಡಕಾಯಿತರನ್ನು ಮಾನಸಿಕ ಪರಿವರ್ತನೆಗೊಳಿಸಿದರು.

ಅವರ ಗೋಸಂರಕ್ಷಣೆಯ ಸತ್ಯಾಗ್ರಹಗಳಿಂದಾಗಿ ಬಹುತೇಕ ರಾಜ್ಯಗಳು ಗೋಹತ್ಯಾ ನಿಷೇಧ ಶಾಸನಗಳನ್ನು ಹೊರ ತಂದುವು.

ಅವರ ಹೃದಯಕ್ಕೆ ಭಗವದ್ಗೀತೆ ಬಹು ಹತ್ತಿರವಾಗಿತ್ತು. ಆದಕ್ಕೆ ಅವರು ಮಾಡಿದ ವ್ಯಾಖ್ಯಾನ ಎಲ್ಲ ಭಾರತೀಯ ಭಾಷೆಗಳಲ್ಲೂ ಅನುವಾಗೊಂಡಿದೆ ಎಂದರೆ ತಪ್ಪಾಗಲಾರದು.

ಅದೃಢದೇಹದ ಆದರೆ ದೃಢವಾದ ಮಾನಸಿಕ ಶಕ್ತಿಯ 88 ವರ್ಷದ ಈ ಸಂತರು ಔಷಧೋಪಚಾರ ಆಹಾರ ಪಾನೀಯಗಳನ್ನೂ ನಿರಾಕರಿಸಿ ತೀರಿಕೊಂಡಾಗ ಇಡೀ ರಾಷ್ಟ್ರವೇ ಮೌನದಿಂದ ನಮಿಸಿದೆ.

Edited and Published on behalf of the T. T. Devasthanams by K. Subba Rao, M. A., and Printed at
T. T. D. Press by M. Vijayakumar Reddy, Manager, T. T. D. Press, Tirupati - 517 501.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿ.

## ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.